ಶ್ರೀಃ

# ಮುನ್ನುಡಿ

ಶ್ರೀಯುತ ಪಾವಂಜೆ ಗುರುರಾಯರ ವಂಶಜರೆಲ್ಲರು ಇತ್ತೀಚೆಗೆ ಸೇರಿ ಗುರುರಾಯರ ಮೊಮ್ಮಗಳಾದ, ಕನ್ನಡ ಚಿತ್ರರಂಗದ ಗತಕಾಲದ ಹೆಸರಾಂತ ನಾಯಕಿ ನಟಿಯರಾದ ಶ್ರೀಮತಿ ಹರಿಣಿ ಎಸ್. ರಾವ್ ಇವರ ಮುಂದಾಳತ್ವದಲ್ಲಿ ಸುಮಾರು ಒಂದು ಶತಮಾನಕ್ಕೂ ಹಿಂದೆ ಶ್ರೀ ಪಾವಂಜೆ ಗುರುರಾಯರು ಕನ್ನಡ ಸಾರಸ್ವತ ಪ್ರಪಂಚಕ್ಕೆ ಮಾಡಿದ ಅನುಪಮ ಸೇವೆಯನ್ನು ಸ್ಮರಿಸಿ, ಇಂದು ಕನ್ನಡದ ಜನತೆ ಅದನ್ನು ಮರೆತಿದ್ದಾರೆ ಎಂದು ಖೇದ ವ್ಯಕ್ತಪಡಿಸಿದರು. ಈ ಪರಿಸ್ಥಿತಿಯನ್ನು ಸರಿಪಡಿಸಲು ಇಂದಿನ ಯುವಕರಿಗೆ ಅವರ ಚರಿತ್ರೆಯನ್ನು ಮತ್ತು ಗುರುರಾಯರು ಮಾಡಿದ ಕನ್ನಡಾಂಬೆಯ ಅಸಾಧಾರಣ ಸೇವಯನ್ನು ಪರಿಚಯಿಸಲು ಹಲವು ಕಾರ್ಯಕ್ರಮಗಳನ್ನು ಅವರ ಕುಟುಂಬಸ್ಥರು ಹಮ್ಮಿಕೊಳ್ಳಲು ನಿಶ್ಚಯಿಸಿದರು.

ಈ ಕಾರ್ಯಕ್ರಮಗಳಲ್ಲಿ ಪ್ರಮುಖವಾದದ್ದು

1) ಅಂತರ್ಜಾಲದಲ್ಲಿ ಅವರ ಮತ್ತು ಅವರ ಸಾಧನೆಗಳ ಬಗೆಗೆ ಮಾಹಿತಿಯನ್ನು ಉಪಲಬ್ದಗೊಳಿಸುವುದು.

2) 23–09–2023ಕ್ಕೆ ಅವರು ಗತಿಸಿ 75 ವರ್ಷಗಳಾಗುತ್ತವೆ. ಅಂದು ಉಡುಪಿಯ ಶ್ರೀಕೃಷ್ಣಮಠದ ರಾಜಾಂಗಣದಲ್ಲಿ ಅವರ ಸ್ಮರಣಾರ್ಥ ಕಾರ್ಯಕ್ರಮವನ್ನು ಏರ್ಪಡಿಸುವುದು.

ಇದಕ್ಕೆ ಪೂರ್ವಭಾವಿಯಾಗಿ ಶ್ರೀ ಪಾವಂಜೆ ಗುರುರಾಯರ ಜೀವನ ಮತ್ತ ಸಾಧನೆಗಳನ್ನು ಪರಿಚಯಿಸುವ ಒಂದು ಕಿರು ಲೇಖನ ಬರೆದರೆ ಉಪಯುಕ್ತವಾದೀತೆಂದು, ಗುರುರಾಯರ ಮೊಮ್ಮಕ್ಕಳಲ್ಲಿ ಒಬ್ಬರಾದ ದಿ॥ ಗುರುಮೋಹನ ಉಪಾಧ್ಯಾಯರು ಅಭಿಪ್ರಾಯಪಟ್ಟರು. ಅವರ ಅನಿಸಿಕೆಯಂತೆ ಗುರುರಾಯರ ಚರಿತ್ರೆ ಮತ್ತು ಸಾಧನೆಗಳ ಬಗೆಗೆ ಮಾಹಿತಿಯನ್ನು ವಿಭಿನ್ನ ಮೂಲಗಳಿಂದ ಕಲೆಹಾಕಿ ಸುಮಾರು 18 ಪುಟಗಳ ಲೇಖನವನ್ನು ಬರೆದೆ.

ತದನಂತರ ಇದನ್ನು ಕಿರು ಹೊತ್ತಿಗೆಯ ರೂಪದಲ್ಲಿ ಸಂಗ್ರಹಿಸಿ ಮುದ್ರಿಸಿದರೆ ಹೆಚ್ಚು ಉಪಯುಕ್ತವೆಂದು ಹಲವರು ಸಲಹೆಯನ್ನು ನೀಡಿದರು. ಆದ್ದರಿಂದ ಇನ್ನೂ ಹೆಚ್ಚು ಮಾಹಿತಿಯನ್ನು ಸಂಗ್ರಹಿಸಿ ಸುಮಾರು 50 ಪುಟಗಳಷ್ಟು ವಿಷಯವನ್ನು ಮುದ್ರಿಸಿ ಪುಸ್ತಕದ ರೂಪದಲ್ಲಿ ಆಸಕ್ತರಿಗೆ ಹಂಚಲು ಉದ್ಯುಕ್ತನಾದೆ.

ಗುರುರಾಯರು ಗತಿಸಿ 75 ವರ್ಷಗಳೇ ಕಳೆದಿರುವುದರಿಂದ ಅವರನ್ನು ಕಂಡವರು ಈಗ ತುಂಬಾ ವಿರಳ. ಅವರ ಜೀವನದ ಬಗ್ಗೆ ಮುದ್ರಿತ ಪುಸ್ತಕ ಅಥವಾ ಲೇಖನಗಳೂ ಇಲ್ಲವೆಂದೇ ಹೇಳಬಹುದು. ವರಿಷ್ಠ ಐತಿಹಾಸಿಕ ಕಾದಂಬರಿಕಾರರಾದ ದಿ॥ ಶ್ರೀ ಶ್ರೀನಿವಾಸ ರಾವ್ ಕೊರಟಿಯವರು "ಪಾವಂಜೆ ಗುರುರಾಯರು" ಎಂಬ ಪುಸ್ತಕವನ್ನು ಬಹಳ ಹಿಂದೆ ಬರೆದು ಮುದ್ರಿಸಿದ್ದರು ಎಂದು ತಿಳಿದು ಬರುತ್ತದೆ. ಆದರೆ ದುರದೃಷ್ಟವಶಾತ್ ಅದನ್ನು ಅವಲೋಕಿಸುವ ಅವಕಾಶ ನಮಗಿನ್ನೂ ಲಭಿಸಿಲ್ಲ. ಆದ್ದರಿಂದ ಅವರ ಬಗೆಗಿನ ಮಾಹಿತಿಯನ್ನು ಕಲೆಹಾಕುವುದು ದೊಡ್ಡ ಸಾಹಸವೇ ಆಯಿತು. ಅವರ ಮಕ್ಕಳಾದ ದಿ॥ ಮಧ್ವಮುನಿರಾಯರು ಮತ್ತು ದಿ॥ ಸೇತುಮಾಧವರಾಯರು ತಮ್ಮ ತಂದೆಯ ಬಗ್ಗೆ ಹೇಳುತ್ತಿದ್ದ ಕೆಲವು ಮಾತುಗಳಿಂದ ಮತ್ತು ಗುರುರಾಯರು ಮುದ್ರಿಸಿ ಪ್ರಕಟಿಸಿದ ಪುಸ್ತಕಗಳ ಪರಾಮರ್ಶೆಯಿಂದ ಈ ಕಿರುಹೊತ್ತಿಗೆಗೆ ವಿಷಯವನ್ನು ಸಂಗ್ರಹಿಸಲಾಗಿದೆ.

2015ರಲ್ಲಿ ಉಡುಪಿಯ ಎಂ.ಜಿ.ಎಂ. ಕಾಲೇಜಿನ "ಕನಕದಾಸ ಅಧ್ಯಯನ ಸಂಶೋಧನ ಪೀಠ"ದ ವತಿಯಿಂದ "ಕನಕದಾಸ ಕೀರ್ತನೆ" ಎಂಬ ಪುಸ್ತಕವು ಪ್ರಕಟಿಸಲಾಯಿತು. ಅದರ ಉಪೋದ್ಘಾತದಲ್ಲಿ ಶ್ರೀ ಪಾವಂಜೆ ಗುರುರಾಯರ ಬಗೆಗೆ ಸುದೀರ್ಘ ಪರಿಚಯಾತ್ಮಕ ಲೇಖನವೂ ಮುದ್ರಿತವಾಗಿತ್ತು. ಅದರಲ್ಲಿ ಮುದ್ರಿತ ವಿಷಯವನ್ನು ನಾವು ಈ ಪುಸ್ತಕದಲ್ಲಿ ಹೇರಳವಾಗಿ ಬಳಸಿಕೊಂಡಿದ್ದೇವೆ. ನಾವು ಅವರಿಗೆ ಚಿರ ಋಣಿ. ಈ "ಕನಕದಾಸ ಕೀರ್ತನೆ" ಪುಸ್ತಕದಲ್ಲಿದ್ದ ಡಾ॥ ಬನ್ನಂಜೆ ಗೋವಿಂದಾಚಾರ್ಯರ ಮುನ್ನುಡಿಯ ಮುಖ್ಯಾಂಶಗಳನ್ನು ಯಥಾವತ್ತಾಗಿ ಪ್ರಸ್ತುತ ಪಡಿಸಲಾಗಿದೆ.

**ಇಂತಿ ಸಂಗ್ರಹಕಾರ**

ಶ್ರೀಃ

# ಶ್ರೀ ಪಾವಂಜೆ ಗುರುರಾಯರು

## ಪ್ರಸ್ತಾವನೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಿಸಿ ತಮ್ಮ ವಿಶಿಷ್ಟ ಸಾಹಿತ್ಯ ಸೇವೆಯಿಂದ ಕನ್ನಡ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದ ಮಹನೀಯರಲ್ಲಿ ಪಾವಂಜೆ ಗುರುರಾಯರೊಬ್ಬರು. ದುರ್ಲಭವಾಗಿದ್ದ ಶಾಸ್ತ್ರ ಗ್ರಂಥಗಳನ್ನೂ, ಸ್ತೋತ್ರ ಸಾಹಿತ್ಯವನ್ನೂ, ಜನಪದ ಸಾಹಿತ್ಯವೆಂದು ತಿರಸ್ಕಾರಕ್ಕೆ ಒಳಗಾಗಿದ್ದ ಯಕ್ಷಗಾನ ಮತ್ತು ಹೆಣ್ಣುಮಕ್ಕಳ ಅನೇಕ ಹಾಡುಗಳನ್ನೂ, ವಿಶೇಷವಾಗಿ ದಾಸ ಸಾಹಿತ್ಯವನ್ನೂ ಬಹಳ ಶ್ರಮವಹಿಸಿ ಸಂಗ್ರಹಿಸಿ, ಸಂಶೋಧಿಸಿ, ಅಚ್ಚು ಹಾಕಿಸಿ, ಪ್ರಕಟಿಸಿ, ಪ್ರಚಾರಮಾಡಿ, ಈ ವಿಶೇಷ ಸಾಹಿತ್ಯ ಪ್ರಕಾರಗಳನ್ನು ಕಷ್ಟಪಟ್ಟು ಉಳಿಸಿದ ಮಹಾನುಭಾವರು ಪಾವಂಜೆ ಗುರುರಾಯರು. ಈ ಪವಿತ್ರ ಮಹತ್ಕಾರ್ಯದ ಸಂಘಟನಾಶೀಲರಾದ ಶ್ರೀ ಪಾವಂಜೆಯವರಿಗೆ ಯಾವ ಪ್ರಶಸ್ತಿಗಳಾಗಲಿ, ಅಭಿನಂದನಾ ಗ್ರಂಥಗಳಾಗಲಿ, ಶತಮಾನೋತ್ಸವವಾಗಲಿ, ಸ್ಮಾರಕ ಭವನವನ್ನಾಗಲಿ ಕಟ್ಟಲಿಲ್ಲ. ಜನರು ಅವರು ಮಾಡಿದ ಸಾಹಿತ್ಯ ಸೇವೆಯಿಂದ ತಮ್ಮ ಜ್ಞಾನಜ್ಯೋತಿಯನ್ನು ಬೆಳಗಿಸಿಕೊಂಡರು.

ಶ್ರೀ ಗುರುರಾಯರು ಮಾಡಿದ ಸಾಧನೆಗಳನ್ನು ಒಂದು ಪವಾಡವೆಂದರೂ ಅತಿಶಯೋಕ್ತಿ ಅಗಲಿಕ್ಕಿಲ್ಲ. ಒಂದು ಶತಮಾನಕ್ಕೂ ಹಿಂದೆ ಮಾಡಿದ ಈ ಸಾಧನೆಗೆ ಅಗತ್ಯವಿರುವ ಕರ್ತೃತ್ವಶಕ್ತಿ ಮತ್ತು ಧೈರ್ಯವನ್ನು ಇಂದು ನಾವು ಊಹಿಸಲೂ ಸಾಧ್ಯವಿಲ್ಲ. ಅವರು ಕನ್ನಡದ ಕ್ರಾಂತಿಕಾರಿ ಪ್ರಕಾಶಕರಲ್ಲಿ ಅಗ್ರಗಣ್ಯರು. ಮಂತ್ರಗ್ರಂಥಗಳನ್ನು ಅಚ್ಚಿನ ಮನೆಗೊಯ್ಯುವುದೇ ಮಡಿವಂತ ಸಮಾಜದಿಂದ ಮಹಾಪರಾಧ ಎಂದು ಭಾವಿಸಿದ್ದ ಆ ಕಾಲದಲ್ಲಿ ಅವರು ನೂರಾರು ಮಂತ್ರ ಪುಸ್ತಕಗಳನ್ನು ಮುದ್ರಿಸಿ, ಜನಪ್ರಿಯಗೊಳಿಸಿದರು. ಸಮಾಜದ

ಎಲ್ಲ ಪ್ರತಿಕ್ರಿಯೆಗಳನ್ನೂ ದಿಟ್ಟತನದಿಂದ ಸ್ವಾಗತಿಸಿ ತಮ್ಮ ಪ್ರಕಾಶನವನ್ನು ಮುಂದುವರಿಸಿದರು.

ಹರಿದಾಸ ಸಾಹಿತ್ಯವು ಪಾವಂಜೆಯವರ ಅವಿರತ ಪರಿಶ್ರಮದ ಫಲವಾಗಿ ಕ್ರಿಮಿಕೀಟ, ಗೆದ್ದಲು, ಪಂಡಿತರ ಉಪೇಕ್ಷೆಗಳಿಗೆ ಆಹಾರವಾಗದೆ ಬದುಕಿ ಉಳಿದುಕೊಂಡಿದ್ದಲ್ಲದೆ, ಅಶಿಕ್ಷಿತ ಹೆಣ್ಣುಮಕ್ಕಳ, ಹರಿದಾಸರ ಬಾಯಲ್ಲಿ ಮೌಕಿಕ ಪರಂಪರೆಯಲ್ಲಿ (Oral tradition) ಬಂದು ಅಶುದ್ಧವಾಗಿ, ಅಪೂರ್ಣರೂಪದಲ್ಲಿ ಇದ್ದದ್ದು, ಪರಿಷ್ಕೃತಗೊಂಡು, ಲಿಖಿತರೂಪದಲ್ಲಿ, ಶುದ್ಧ ಪಾಠದೊಂದಿಗೆ ದೊರಕುವಂತಾಯಿತು. ಇಂದು ಕರ್ನಾಟಕ ಮತ್ತು ಇತರ ರಾಜ್ಯಗಳ ಹಲವು ವಿಶ್ವವಿದ್ಯಾಲಯಗಳಲ್ಲಿ ಹರಿದಾಸ ಸಾಹಿತ್ಯದ ವಿಷಯದಲ್ಲಿ ಸಂಶೋಧನೆಗಳು ನಡೆಯುತ್ತಿದೆ. ಇದಕ್ಕೆಲ್ಲಾ ನಾಂದಿ ಹಾಡಿದವರು ಶ್ರೀ ಪಾವಂಜೆ ಗುರುರಾಯರು.

ಪುರಂದರದಾಸರಿಂದ ತೊಡಗಿ ಜಗನ್ನಾಥದಾಸರವರೆಗಿನ ಎಲ್ಲಾ ಅಪರೋಕ್ಷಜ್ಞಾನಿಗಳಾದ ಹರಿದಾಸರ ನೂರಾರು ಕೃತಿಗಳು ಶುದ್ಧರೂಪದಲ್ಲಿ ಪ್ರಕಟವಾದುದ್ದಲ್ಲದೆ ಕೇವಲ ಹೆಸರಿನಲ್ಲಿ ಮಾತ್ರ ಉಳಿದಿದ್ದ ಅಸಂಖ್ಯಾತ ಹರಿದಾಸ ಕೃತಿಗಳು ಪುಸ್ತಕ ರೂಪದಲ್ಲಿ ದೊರಕುವಂತೆ ಆಯಿತು.

ಪಾವಂಜೆ ಗುರುರಾಯರು ಯಾವಾಗಲೂ ತಾವು ಪ್ರಕಟಿಸುವ ಪುಸ್ತಕದ ದರವು ಶ್ರೀಸಾಮಾನ್ಯರ ಕೈಗೆಟಕುವಂತಿರಬೇಕು ಎಂಬ ಉದ್ದೇಶವನ್ನು ಹೊಂದಿದ್ದರು. ಕಾಗದಗಳಿಗೆ ಬರಗಾಲವಿದ್ದ ಆ ಕಾಲದಲ್ಲಿ ವಿಷಯಗಳನ್ನು ತುಂಬಾ ಸಂಕ್ಷೇಪವಾಗಿ ಬರೆದು, ಪುಟವಿನ್ಯಾಸವನ್ನು ಚಿಕ್ಕದಾಗಿ ಮತ್ತು ಚೊಕ್ಕದಾಗಿ ಮಾಡಿ ಅತ್ಯಂತ ಕಡಿಮೆ ಪುಟಗಳಲ್ಲಿ ಹೆಚ್ಚಿನ ವಿಷಯವನ್ನು ತುಂಬುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು.

2015 ರಲ್ಲಿ ಉಡುಪಿಯ ಎಂ.ಜಿ.ಎಂ. ಕಾಲೇಜಿನ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದಲ್ಲಿರುವ ಕನಕ ಅಧ್ಯಯನ ಸಂಶೋಧನ ಪೀಠದ ವತಿಯಿಂದ ಪ್ರಕಾಶಿತ "ಕನಕದಾಸ ಕೀರ್ತನೆ"ಯ ಪೀಠಿಕೆಯಲ್ಲಿ ಹಿರಿಯ ವಿದ್ವಾಂಸರೂ, ಸಂಶೋಧಕರೂ, ಎಂ.ಜಿ.ಎಂ. ಕಾಲೇಜಿನ ನಿವೃತ್ತ ಪ್ರಾಧ್ಯಾಪಕರೂ ಆದ ಡಾ॥ ಹೆರಂಜೆ ಕೃಷ್ಣ ಭಟ್ಟರು ಬರೆಯುತ್ತಾರೆ. "ಪುರಂದರ–ಕನಕರ ದಾಸಸಾಹಿತ್ಯವನ್ನು ಕಂಠದಿಂದ ಪುಸ್ತಕರೂಪಕ್ಕೆ ತಂದುಕೊಟ್ಟು ಹೊಸ ಕಾಲಕ್ಕೆ

ಅನುವಾಗುವಂತೆ ಈ ಸಾಹಿತ್ಯವನ್ನು ಒದಗಿಸಿ ಕೊಡುವವರಲ್ಲಿ ಉಡುಪಿಯ ಪಾವಂಜೆ ಗುರುರಾಯರ ಸಾಹಸ ಅನುಪಮವಾದುದು." ಎಂದು.

ಇನ್ನೊಂದು ಅಪೂರ್ವ ಮತ್ತು ಆಶ್ಚರ್ಯಕರವಾದ ಸಂಗತಿಯೆಂದರೆ ಶ್ರೀಪಾವಂಜೆ ಗುರುರಾಯರಿಗೆ ಸಾಂಪ್ರದಾಯಿಕ ಸಂಗೀತದಲ್ಲಿದ್ದ ಪ್ರಾವೀಣ್ಯ. ತಾವು ಪ್ರಕಟಿಸಿದ ಎಲ್ಲಾ ಹರಿದಾಸ ಪದ್ಯಗಳಿಗೆ ಹಾಗು ಯಕ್ಷಗಾನದ ಪದ್ಯಗಳಿಗೆ ರಾಗ ಮತ್ತು ತಾಳಗಳನ್ನು ಸೂಚಿಸುವ ನಿಯಮವನ್ನು ಇಟ್ಟುಕೊಂಡಿದ್ದರು. ಇದಕ್ಕೆ ಅಪವಾದಗಳು ತುಂಬಾ ವಿರಳ. ಇವರು ಹರಿಕಥಾ ವಿದ್ವಾನ್ ಹಂಡೆ ಶ್ರೀಪಾದದಾಸರಿಂದ ಹಲವಾರು ಕೀರ್ತನೆಗಳಿಗೆ ರಾಗ, ತಾಳ ಹಾಕಿಸಿದ್ದರೆಂದು "ವಾದಿರಾಜರ ಕೀರ್ತನೆಗಳು" ಇದರ ದ್ವಿತೀಯಾವೃತ್ತಿಯ ಉಪೋದ್ಘಾತದಲ್ಲಿ ಬರೆದಿದ್ದಾರೆ.

ತಮ್ಮ ಜೀವಿತದ 79 ವರ್ಷಗಳ ಅವಧಿಯಲ್ಲಿ ಐದು ನೂರಕ್ಕೂ ಹೆಚ್ಚಿನ ಚಿಕ್ಕ, ದೊಡ್ಡ ಗ್ರಂಥಗಳನ್ನು ಪ್ರಕಟಿಸಿ, ಸುಮಾರು ಹತ್ತು ಸಹಸ್ರ ಪುಟಗಳಿಗೂ ಮೀರಿದ ಶ್ರೇಷ್ಠ ಸಾಹಿತ್ಯವನ್ನು ನಾಡಿಗೆ ನೀಡಿದರು. ಇಷ್ಟನ್ನೆಲ್ಲಾ ಅವರು ಕೇವಲ ಕರ್ತವ್ಯ ದೃಷ್ಟಿಯಿಂದ ಮಾಡಿದರು. ಅವರು ಯಾವುದೇ ಸಿದ್ಧಿ, ಪ್ರಸಿದ್ಧಿ, ಅಧಿಕಾರ, ಕೀರ್ತಿ, ಗೌರವಗಳಿಗೆ ಆಸೆ ಪಡದೆ, ಭಗವಂತ ತಮಗೆ ಒಪ್ಪಿಸಿದ ಕಾರ್ಯವನ್ನು ಅವನ ಆರಾಧನೆ ಎಂಬ ಭಾವದಿಂದ, ಶ್ರದ್ಧಾ-ಭಕ್ತಿಗಳಿಂದ ಮಾಡಿದರು. ಅವರು ಬದುಕಿದ್ದಾಗ ಎಲೆಮರೆಯ ಕಾಯಿಯಂತೆ ಜೀವಿಸಿದ್ದರು.

ಒಂದು ರೀತಿಯಲ್ಲಿ ಗುರುರಾಯರ ಬಾಳ್ವೆಯು ಪುರಂದರದಾಸರ ಕೃತಿಯ

"ಕೆರೆಯ ನೀರನು ಕೆರೆಗೆ ಚೆಲ್ಲಿ,
ವರವ ಪಡೆದವರಂತೆ ಕಾಣಿರೊ
ಹರಿಯ ಕರುಣೆಯಿಂದಾದ ಕಾರ್ಯವ,
ಹರಿಸಮರ್ಪಣೆ ಮಾಡಿ ಬದುಕಿರೊ"

ಎಂಬ ನುಡಿಗೆ ನಿದರ್ಶನದಂತಿತ್ತು.

ಶ್ರೀ ಪಾವಂಜೆ ಗುರುರಾಯರು ಜನ್ಮತಳೆದು ಇಂದಿಗೆ ಸುಮಾರು 150ಕ್ಕೂ ಹೆಚ್ಚು ವರ್ಷಗಳಾದರೂ, ಅವರು ಭೂಮಿಯಿಂದ ಅದೃಷ್ಯರಾಗಿ 75

ವರ್ಷಗಳಾದರೂ, ಇಂದಿಗೂ ಹಲವು ಭಾವುಕರು ಕೃತಜ್ಞತಾಪೂರ್ವಕರವಾಗಿ ಅವರನ್ನು, ಅವರು ಮಾಡಿದ ಕೆಲಸವನ್ನೂ ಸ್ಮರಿಸುತ್ತಾರೆ ಎನ್ನುವುದು ಸಾಮಾನ್ಯ ಸಂಗತಿಯಲ್ಲ. ಜನರು ಅವರು ಮಾಡಿದ ಅತ್ಯಪರೂಪವಾದ ಹಾಗು ಕಷ್ಟಸಾಧ್ಯವಾದ ಸಾಹಿತ್ಯ ಸೇವಯಿಂದ ತಮ್ಮ ಜ್ಞಾನ ಜ್ಯೋತಿಯನ್ನು ಬೆಳಗಿಸಿಕೊಂಡರು. ಇನ್ನಿತರರು ತಮ್ಮ ಅಧ್ಯಾತ್ಮ ಪಿಪಾಸೆಯನ್ನು ನೀಗಿಸಿಕೊಂಡರು. ಅನೇಕರು ಅವರು ಪ್ರಕಟಿಸಿದ ಶಾಸ್ತ್ರಗ್ರಂಥಗಳಿಂದ ಮತ್ತು ನಿತ್ಯಾನುಷ್ಠಾನ ಗ್ರಂಥಗಳಿಂದ ಸದಾಚಾರಸಂಪನ್ನರಾದರು. ಯಕ್ಷಗಾನ ಸಾಹಿತ್ಯವು ಅವರಿಂದಾಗಿ ಬೆಳಕನ್ನು ಕಂಡಿತು. ಇವುಗಳಿಗೆ ರತ್ನಪ್ರಾಯವಾಗಿ ತಮ್ಮ ನಿರ್ಮಲಕಾಂತಿಯಿಂದ ಇಂದಿಗೂ ಬೆಳಗುತ್ತಿರುವ ಶ್ರೀ ಪಾವಂಜೆ ಗುರುರಾಯರ ಹರಿದಾಸಸಾಹಿತ್ಯ ಅವರ ಕೀರ್ತಿಧ್ವಜವಾಗಿ–ವೈಜಯಂತಿಯಾಗಿ ಕಂಗೊಳಿಸುತ್ತಿವೆ. ಅವರ ಸಾಹಸ, ಕಷ್ಟಸಹಿಷ್ಣುತೆ, ಸಾತ್ವಿಕ ಹಾಗೂ ಸರಳಜೀವನವು ಸ್ಫೂರ್ತಿಯ ಚಿಲುಮೆಯಾಗಿ, ಅವರ ಹೆಸರು ಪ್ರಾತಃಸ್ಮರಣೀಯರ ಸಾಲಿನಲ್ಲಿ ಸೇರುತ್ತದೆ.

ಶ್ರೀ ಪಾವಂಜೆ ಗುರುರಾಯರ ಈ ವಾಙ್ಮಯ ಸೇವೆ ಮತ್ತು ಸಾಧನೆಗಳು ಸ್ವಾತಂತ್ರ್ಯ ಪೂರ್ವದ ಭಾರತದಲ್ಲಿ ನಡೆಯಿತು ಎನ್ನುವುದನ್ನು ನಾವು ಮರೆಯುವಂತಿಲ್ಲ. ಅಂದಿನ ಬ್ರಿಟಿಷ್ ಸರಕಾರವು ಪುಸ್ತಕ ಮುದ್ರಣ, ಮಾರಾಟಾದಿಗಳನ್ನು ಸಂಶಯದ ದೃಷ್ಟಿಯಿಂದ ನೋಡುತ್ತಿತ್ತು. ಅದರಲ್ಲೂ ಹಿಂದೂ ಧರ್ಮಕ್ಕೆ ಸಂಬಂಧಿಸಿದ ಪುಸ್ತಕಗಳ ಮುದ್ರಣ, ಪ್ರಸಾರ ಮತ್ತು ಮಾರಾಟಗಳಿಗೆ ತೊಡಕುಗಳಿರುತ್ತಿದ್ದವು. ಪ್ರೋತ್ಸಾಹವಂತು ದೂರದ ಮಾತೆ ಸರಿ.

ಶ್ರೀ ಪಾವಂಜೆ ಗುರುರಾಯರು ತಾವು ನಂಬಿದ ಶ್ರೇಷ್ಠ ಆದರ್ಶಕ್ಕೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು, ಅದನ್ನು ಕಾರ್ಯರೂಪಕ್ಕೆ ತರಲು ಯತ್ನಿಸಿದ ಒಂದು ಸಾಧಕಜೀವ. ಗ್ರಂಥಪ್ರಕಟಣೆ ಅವರ ಪಾಲಿಗೆ ಕೇವಲ ವೃತ್ತಿಯಾಗಿರಲಿಲ್ಲ; ಪ್ರವೃತ್ತಿಯಾಗಿರಲಿಲ್ಲ. ಅದೊಂದು ಭಗವಂತನನ್ನು ಒಲಿಕೊಳ್ಳಲು ತಮ್ಮ ಪಾಲಿಗೆ ಬಂದ ಪವಿತ್ರ ಕರ್ತವ್ಯವೆಂದು ತಿಳಿದಿದ್ದರು. ಈ ಕರ್ತವ್ಯವನ್ನು ಅವರು ಪೂಜೆ ಎಂಬಂತೆ ದಣಿವಿಲ್ಲದೆ, ಲೋಪ ದೋಷಗಳಿಲ್ಲದೆ ಮಾಡಿದರು.

## ಬಾಲ್ಯ ಮತ್ತು ಯೌವನ :

ಗುರುರಾಯರು ಮಂಗಳೂರು ತಾಲೂಕಿನ ಪಾವಂಜೆ ಗ್ರಾಮದಲ್ಲಿ ಒಂದು ಶ್ರೀಸಾಮಾನ್ಯ ಕುಟುಂಬದಲ್ಲಿ ಜನಿಸಿದರು. ಇವರ ತಂದೆ ಕೊಳುವೈಲು ರಾಮಕೃಷ್ಣಯ್ಯ. ತಾಯಿ ರಾಜಮ್ಮ. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಶ್ರೀ ಶೀರೂರು ಮಠದ ಶಿಷ್ಯರು. ಇಂಥ ಭಗವದ್ಭಕ್ತರೂ, ಸಾತ್ವಿಕರೂ ಆದ ದಂಪತಿಗಳಿಗೆ ಮನೆ ತುಂಬಾ ಮಕ್ಕಳು. ಗುರುರಾಯರಲ್ಲದೆ ಭೀಮರಾಯರು, ಹನುಮಂತರಾಯರು, ಮತ್ತು ಗುಂಡುರಾಯರೆಂಬ ಇತರ ಗಂಡು ಮಕ್ಕಳೂ, ಜಲಜಾಕ್ಷಿ ಮತ್ತು ಭವಾನಿ ಎಂಬ ಹೆಣ್ಣು ಮಕ್ಕಳೂ ಇದ್ದರು. ರಾಮಕೃಷ್ಣಯ್ಯನವರು ಬೇಸಾಯದಿಂದ ಜೀವನ ಸಾಗಿಸುತ್ತಿದ್ದರು. ಎಷ್ಟು ಕಷ್ಟಪಟ್ಟರೂ ಹೊಟ್ಟೆಗೆ ಬಟ್ಟೆಗೆ ಸಾಕಾಗುತ್ತಿರಲಿಲ್ಲ.

ಬಾಲಕ ಗುರುರಾಯರು ಹುಟ್ಟಿದ ಮೇಲೆ ಮನೆಯ ಆರ್ಥಿಕ ಸ್ಥಿತಿಗತಿಗಳೇನೂ ಬದಲಾವಣೆಯಾಗಿರಲಿಲ್ಲ. ಆಚಾರನಿಷ್ಠರಾದ ರಾಮಕೃಷ್ಣಯ್ಯನವರು ಆಗಿನ ಸ್ಥಿತಿಗತಿಯಂತೆ ಮತ್ತು ಪದ್ಧತಿಯಂತೆ ಗುರುರಾಯರನ್ನು ಮಠಕ್ಕೆ ವಿದ್ಯಾಭ್ಯಾಸಕ್ಕೆಂದು ಕಳುಹಿಸಿದರು. ಇದರಿಂದಾಗಿ ಲೌಕಿಕವಾಗಿ ಪ್ರಾಥಮಿಕ ಶಿಕ್ಷಣದ ಜೊತೆಗೆ ವೈದಿಕ ಮತ್ತು ಧಾರ್ಮಿಕ ಗ್ರಂಥಗಳ ಪರಿಚಯವಾಯಿತು. ಮುಂದೆ ಏನು ಮಾಡುವುದೆಂದು ಯೋಚಿಸುತ್ತಿರುವಾಗಲೇ ಅವರ ಮೇಲೆ ಕ್ರೈಸ್ತಧರ್ಮದ ಪ್ರಚಾರ ಹಾಗು ಮಾಧ್ಯಮಗಳು ತುಂಬಾ ಪರಿಣಾಮವನ್ನು ಬೀರಿತ್ತು. ಹಾಗಾಗಿ ಗುರುರಾಯರಿಗೆ ಇಂಗ್ಲೀಷ್ ಕಲಿಯುವ ಇಚ್ಛೆಯಾಯಿತು. ಹೀಗಿರಲು ಮುಂದೆ ತಾವು ಮಂಗಳೂರು, ಉಡುಪಿ ಅಥವಾ ತಿರುವನಂತಪುರದಲ್ಲಿ ಇದ್ದು ವಿದ್ಯಾಭ್ಯಾಸ ಮುಂದುವರಿಸುವ ಮಾರ್ಗವೊಂದೇ ಉಳಿದಿತ್ತು.

ಆ ಸಮಯದಲ್ಲಿ ಕೇರಳದ ಗಡಿಪ್ರದೇಶದ ಕುಂಬಳೆಯಲ್ಲಿ ಶ್ರೀ ಪದ್ಮನಾಭ ಇರ್ನಿರಾಯರೆಂಬವರು ಆಯುರ್ವೇದ ವಿದ್ಯೆಯಲ್ಲಿ ನಿಷ್ಣಾತರಾಗಿ, ಎಲ್ಲರ ಗಮನಕ್ಕೆ ಪಾತ್ರರಾದ ವೈದ್ಯರಾಗಿದ್ದರು. ಬಾಲಕ ಗುರುರಾಯರಿಗೆ ಇರ್ನಿರಾಯರ ಪರಿಚಯವಾಯಿತು. ಅವರು ಗುರುರಾಯರ ತಿರುವನಂತಪುರದಲ್ಲಿ ಇಂಗ್ಲಿಷ್ ಕಲಿಯಬೇಕೆಂಬ ಆಕಾಂಕ್ಷೆಯನ್ನರಿತು ಶಾಲೆಯೊಂದರಲ್ಲಿ ಶಿಕ್ಷಣಾವಕಾಶ

ಕಲ್ಪಿಸಿಕೊಟ್ಟಿದ್ದಲ್ಲದೆ ವಿದ್ಯಾರ್ಥಿನಿಲಯದಲ್ಲಿ ಊಟ–ವಸತಿಗಳಿಗೂ ಅನುಕೂಲಪಡಿಸಿಕೊಟ್ಟರು.

ಶ್ರೀ ಗುರುರಾಯರು ತಿರುವನಂತಪುರದಲ್ಲಿ ಎಂಟು ವರ್ಷಗಳ ಕಾಲ ಓದಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಆಧುನಿಕ–ಶಿಕ್ಷಿತ ವ್ಯಕ್ತಿಯಾಗಿ ಪಾವಂಜೆಗೆ ಹಿಂತಿರುಗಿದರು. ಈಗಾಗಲೆ ಇಪ್ಪತ್ತನಾಲ್ಕು ವರ್ಷದ ವ್ಯಕ್ತಿಯಾಗಿದ್ದ ಗುರುರಾಯರಿಗೆ ಹೊಟ್ಟೆಪಾಡಿಗಾಗಿ ಯಾವ ವೃತ್ತಿಯನ್ನು ಆರಿಸಿಕೊಳ್ಳಬೇಕು ಎಂಬ ಸಮಸ್ಯೆಯನ್ನು ಎದುರಿಸಬೇಕಾಯಿತು.

**ವೈದ್ಯಕೀಯ ವೃತ್ತಿಗೆ ಪಾದಾರ್ಪಣೆ :**

ಶ್ರೀ ಪಾವಂಜೆ ಗುರುರಾಯರು ತಮಗೆ ತಿರುವನಂತಪುರದಲ್ಲಿ ವಿದ್ಯಾಭ್ಯಾಸ ಮುಂದುವರಿಸಲು ಸಹಾಯಮಾಡಿದ, ಹೆಸರಾಂತ ಆಯುರ್ವೇದ ಪಂಡಿತರಾದ ಶ್ರೀಪದ್ಮನಾಭ ಇರ್ನಿರಾಯರಿಂದ ಆಕರ್ಷಣೆ ಹೊಂದಿ ವೈದ್ಯವೃತ್ತಿಯನ್ನು ಮುಂದುವರಿಸಲು ನಿಶ್ಚಯಿಸಿದರು. ಇರ್ನಿರಾಯರು ಗುರುರಾಯರ ಮೇಧಾಶಕ್ತಿ ಹಾಗೂ ಸಮಾಜಸೇವೆಯ ಹಂಬಲವನ್ನು ಬಲ್ಲವರಾಗಿದ್ದುದರಿಂದ, ಈ ತರುಣನನ್ನು ತಮ್ಮ ಬಳಿ ಕೆಲಸ ಕಲಿಯಲು ಕುಂಬಳೆಗೆ ಕರೆದೊಯ್ದರು. ಗುರುರಾಯರು ಶ್ರದ್ಧಾಭಕ್ತಿಯಿಂದ ಆಯುರ್ವೇದಶಾಸ್ತ್ರ ವಿದ್ಯೆ, ವೈದ್ಯಗಳನ್ನು ಚೆನ್ನಾಗಿ ಕಲಿತರು. ಯೋಗ್ಯಗುರುಗಳು ದೊರೆತಿದ್ದರು. ಕಲಿಯಲು ಉತ್ಸಾಹವಿತ್ತು. ಅತ್ಯಲ್ಪಕಾಲದಲ್ಲಿ ಗುರುರಾಯರು ನಿಷ್ಣಾತ ವೈದ್ಯರಾಗಿ ಪರಿವರ್ತಿತರಾದರು.

ಶ್ರೀ ಪಾವಂಜೆ ಗುರುರಾಯರು ಮೊದಲಿನಿಂದಲೂ ಹಠದ ಸ್ವಭಾವದವರು. ಒಮ್ಮೆ ಹಿಡಿದುದ್ದನ್ನು ಅವರೆಂದೂ ಕೊನೆಮುಟ್ಟಿಸದೆ ಕೈಬಿಡುತ್ತಿರಲಿಲ್ಲ. ಹಲವು ವರ್ಷಗಳ ಸತತ ಪರಿಶ್ರಮ, ದುಡಿಮೆಗಳಿಂದ ಆಯುರ್ವೇದ ಚೆನ್ನಾಗಿ ನುರಿತು, ಸ್ವತಂತ್ರ ವೈದ್ಯರೆಂದು ವೃತ್ತಿಯನ್ನು ಆರಂಭಿಸಲು ಬೇಕಾದ ಆತ್ಮವಿಶ್ವಾಸವನ್ನು–ಜ್ಞಾನವನ್ನು ರೂಢಿಸಿಕೊಂಡರು. ಪದ್ಮನಾಭ ಇರ್ನಿರಾಯರು ಪಾವಂಜೆಯವರನ್ನು ಆಶೀರ್ವದಿಸಿ ಅವರನ್ನು ಬೀಳ್ಕೊಟ್ಟರು.

ಈ ವೇಳೆಗಾಗಲೇ ಗುರುರಾಯರಿಗೆ ಮದುವೆಯಾಗಿತ್ತು. ಪದ್ಮಾವತಿ ಎಂಬ ಹೆಸರಿನ ಸಾಧ್ವಿಯು ಇವರ ಕೈ ಹಿಡಿದು ಮನೆತುಂಬಿದ್ದಳು. ಇವರಿಗೆ

ಒಂದಾದ ಮೇಲೆ ಒಂದರಂತೆ ನಾಲ್ವರು ಹೆಣ್ಣು ಮಕ್ಕಳು ಜನಿಸಿದ್ದರು. ಇಷ್ಟೆಲ್ಲಾ ಆದರೂ ಅವರ ಆರ್ಥಿಕಸ್ಥಿತಿ ಸುಧಾರಿಸಲೇ ಇಲ್ಲ. ಯಾಕೆಂದರೆ ಅವರು ಹಣ ಸಂಪಾದನೆಗಾಗಿ ನಿರ್ದಿಷ್ಟವಾಗಿ ಯಾವುದೇ ವೃತ್ತಿಯನ್ನು ಅವಲಂಬಿಸಿರಲಿಲ್ಲ.

ಸಂಸಾರ ತಾಪತ್ರಯಗಳು ಹೆಚ್ಚಾಗಿ ಒಂದು ದಿನ ಇದ್ದಕ್ಕಿದ್ದಂತೆ ಉಟ್ಟ ಬಟ್ಟೆಯಲ್ಲೇ ಮುಂಬೈಗೆ ತೆರಳಿ ಬಹಳ ಕಷ್ಟದ ಜೀವನವನ್ನು ನಡೆಸಿ ಪೋಷ್ಟ್ ಆಪೀಸಿನಲ್ಲಿ ಉದ್ಯೋಗ ಲಭಿಸುವಲ್ಲಿ ಸಫಲರಾದರು. ಆದರೆ ಮೇಲಾಧಿಕಾರಿಯ ದುರ್ವರ್ತನೆಯಿಂದ ಬೇಸತ್ತು ಸಿಕ್ಕಿದ್ದ ಕೆಲಸ ಬಿಟ್ಟು ಮತ್ತೆ ಪಾವಂಜೆಗೆ ಹಿಂತಿರುಗಿದರು.

ಆಪ್ತರ ಸಹಾಯದಿಂದ ಹಾಗು ಶತಾಯುಷಿಗಳಾದ ಶ್ರೀಪುತ್ತಿಗೆ ಮಠದ ಶ್ರೀಮತ್ಸುಧೀಂದ್ರತೀರ್ಥ ಶ್ರೀಪಾದಂಗಳವರ ಪ್ರೋತ್ಸಾಹದಿಂದ ಉಡುಪಿಯ ರಥಬೀದಿಯಲ್ಲಿ ಭಂಢಾರಕೇರಿ ಮಠದ ಬಳಿ ಒಂದು ಸಣ್ಣ ಅಂಗಡಿಯಲ್ಲಿ ತಮ್ಮ ಔಷಧಾಲಯವನ್ನು ತೆರೆದರು. ಇದರಿಂದ ಆರ್ಥಿಕವಾಗಿ ಪರಿಸ್ಥಿತಿ ಹೆಚ್ಚು ಸುಧಾರಿಸದಿದ್ದರೂ ಔಷಧಾಲಯಕ್ಕೆ ಬಂದು–ಹೋಗುವ ಗಣ್ಯವ್ಯಕ್ತಿಗಳ ಸಂಪರ್ಕದಿಂದ ಅಷ್ಟಮಠಗಳಲ್ಲಿ ಗುರುರಾಯರಿಗೆ ಮತ್ತು ಅವರ ಸಲಹೆ ಸಮಾಲೋಚನೆಗಳಿಗೆ ಮಹತ್ವದ ಗೌರವ ದೊರಕುವಂತೆ ಆಯಿತು.

ಮುಂದೆ ತುಂಬಾ ಆಶ್ಚರ್ಯಕರ ರೀತಿಯಲ್ಲಿ ಗುರುರಾಯರು ಊರಿನಲ್ಲಿರದ ಸಮಯದಲ್ಲಿ ತಮ್ಮ ಕಾಂಪೌಂಡರಿನಿಂದ ಔಷಧಿ ಸ್ವೀಕರಿಸಿ ಇವರ ಮಗಳಾದ ಜಾನಕಿಬಾಯಿಯವರು ಮೃತ್ಯುವನ್ನಪ್ಪಿದರು. ಇದರಿಂದ ಬೇಸತ್ತು, ತಮ್ಮ ಮಗಳನ್ನು ಉಳಿಸಿಕೊಳ್ಳಲಾಗದಿದ್ದ ವೈದ್ಯಕೀಯ ವೃತ್ತಿಯನ್ನು ನಂಬಿ ಪ್ರಯೋಜನವೇನು ಎಂದುಕೊಂಡು, ಭಗವಂತನ ಇಚ್ಛೆಯೆಂದು ತಿಳಿದು, ಕೇಶವಾಚಾರ್ಯರೆಂಬವರಿಗೆ ಅಲ್ಲಿದ್ದ ಪದಾರ್ಥಗಳ ಸಮೇತ ಅಂಗಡಿಯನ್ನು ಯಾವುದೇ ಪ್ರತಿಫಲವಿಲ್ಲದೆ ಕೊಟ್ಟುಬಿಟ್ಟರಂತೆ. ಹೀಗೆ ಶ್ರೀ ಪಾವಂಜೆ ಗುರುರಾಯರ ಜೀವನದ ಒಂದು ಪ್ರಮುಖ ಘಟ್ಟ ಮುಗಿದು ಅವರ ಜೀವನದ ನಿಜವಾದ ಕಾರ್ಯಕ್ಕೆ ವಿಧಿ ಅವರನ್ನು ಸಜ್ಜುಗೊಳಿಸಿತು.

**ಅಧ್ಯಾತ್ಮ ಪುಸ್ತಕ ಪ್ರಕಾಶನದೆಡೆಗೆ ಎಳೆದು ತಂದ ವಿಧಿ :**

ಶ್ರೀ ಪಾವಂಜೆ ಗುರುರಾಯರನ್ನು ಹರಿದಾಸ ಸಾಹಿತ್ಯ ಕ್ಷೇತ್ರಕ್ಕೆ, ಪುಸ್ತಕ ಪ್ರಕಾಶನಕ್ಕೆ ಕರೆತಂದ ಶಕ್ತಿ ಯಾವುದು? ಉತ್ತರವಾಗಿ ಬಹುವಿಧ ರೂಪು-ರೇಖೆಗಳು ಮೂಡಿಬರುತ್ತವೆ. ಅವರು ಔಷಧಿಗಳ ಜೊತೆ, ತಮ್ಮ ಅಂಗಡಿಯಲ್ಲಿ ಪೂಜಾ ಸಾಮಗ್ರಿಗಳನ್ನು, ನಿತ್ಯಾನುಷ್ಠಾನಕ್ಕೆ ಬೇಕಾಗುವ ಇನ್ನಿತರ ವಸ್ತುಗಳನ್ನು ತಮ್ಮ ಬಿಡುವಿನ ಸಮಯದಲ್ಲಿ ಮಾರುತ್ತಿದ್ದರು. ಇದರಿಂದ ಪ್ರಚೇತರಾಗಿ ಆಗಿನ ಕಾಲದಲ್ಲಿ ಸ್ತೋತ್ರ ಪದಗಳು, ಪೂಜಾಪದ್ಧತಿ ಪುಸ್ತಕಗಳು ಕನ್ನಡದಲ್ಲಿ ಸಿಗದಿರುವುದನ್ನು ಅರಿತು, ಅದರ ಸಮಸ್ಯೆಯನ್ನು ಪರಿಹರಿಸಲು ಯೋಚಿಸುತ್ತಿದ್ದರು.

ಶ್ರೀ ಪಾವಂಜೆ ಗುರುರಾಯರು ಬ್ರಿಟಿಷ್ ಕಾಲದ ಭಾರತದಲ್ಲಿ, ತಮ್ಮ ಸುತ್ತ ಮುತ್ತ ಹಬ್ಬಿದ್ದ ಕ್ರೈಸ್ತ ಮಿಷನರಿಗಳು ತಾವು ನಂಬಿದ್ದ ಕ್ರೈಸ್ತಮತದ ಪ್ರಸಾರಕ್ಕೆ ತಮ್ಮ ಸರ್ವಸ್ವವನ್ನು ಮುಡಿಪಾಗಿಟ್ಟಿರುವುದನ್ನು ಕಂಡರು. ಅದರಂತೆ ತಾವೂ ಕೂಡ ನಂಬಿದ್ದ ತತ್ತ್ವಗಳಿಗೆ, ದ್ವೈತಶಾಸ್ತ್ರಪ್ರಸಾರಕ್ಕೆ ಯಾಕೆ ಪ್ರಯತ್ನಿಸಬಾರದು ಎಂದು ಚಿಂತಿಸಿ, ಅನೇಕ ವೃತ್ತಿಗಳನ್ನು ಆಯ್ದು, ಕಯ್ಯಾಡಿಸಿ ಕೊನೆಗೆ ಜ್ಞಾನಕಾರ್ಯಕ್ಕೆ, ಮಧ್ವಶಾಸ್ತ್ರದ ಮತ್ತು ದಾಸಸಾಹಿತ್ಯದ ಪ್ರಸಾರಕ್ಕೆ ತಮ್ಮ ಬಾಳ್ವೆಯನ್ನರ್ಪಿಸಿಕೊಂಡರು.

ಶ್ರೀ ಪಾವಂಜೆ ಗುರುರಾಯರನ್ನು ಚೆನ್ನಾಗಿ ಬಲ್ಲ, ಉಡುಪಿಯ ಎಂ.ಜಿ.ಎಂ. ಕಾಲೇಜಿನ ಪ್ರಾಧ್ಯಾಪಕರಾಗಿದ್ದ ಶ್ರೀಯುತ ಎಸ್.ಕೆ. ಶ್ರೀಪತಿ ಆಚಾರ್ಯರು ಗುರುರಾಯರು ವೈದ್ಯಕೀಯ ವೃತ್ತಿಯನ್ನು ಕೈಬಿಟ್ಟು ಪುಸ್ತಕ ಪ್ರಕಾಶನದ ವೃತ್ತಿಯನ್ನು ತಮ್ಮದಾಗಿಸಿಕೊಂಡ ಬಗೆಗೆ ಹೀಗೆ ವರ್ಣಿಸುತ್ತಾರೆ – "ಪಾವಂಜೆ ಗುರುರಾಯರು ನಾರು-ಬೇರು ಕಷಾಯಗಳ ಔಷಧಿಯನ್ನೇ ಮಾರುವ ಪ್ರವೃತ್ತಿಯಲ್ಲಿಯೇ ನಿರತರಾಗಿ ತಮ್ಮ ಜೀವನವನ್ನು ಸಾಗಿಸಿದ್ದರೆ, ಅವರ ಹೆಸರು ಮತ್ತೆ ಮತ್ತೆ ನಮ್ಮ ನಾಡಿನಲ್ಲಿ ಕೇಳಿ ಬರುತ್ತಿರಲಿಲ್ಲ. ಆದುದರಿಂದ ಕನ್ನಡದಲ್ಲಿ ಅಪೂರ್ವ ಗ್ರಂಥಗಳನ್ನು ಪ್ರಕಟಪಡಿಸಿ ನಮ್ಮ ನಾಡಿನಲ್ಲಿ ಮನೆಮಾತಾಗಿ ಕೀರ್ತಿ ಪಡೆಯುವಂತಾದುದು ಯೋಗಾಯೋಗವೆಂದೇ ಹೇಳಬೇಕು."

ಮತ್ತೊಂದು ಅಂಶವೆಂದರೆ ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆಯುವ ವೈಭವದ ಪರ್ಯಾಯ ಮಹೋತ್ಸವದಲ್ಲಿ ಕೃಷ್ಣಭಕ್ತರು ಬಂದು ಅಷ್ಟಮಠಗಳಲ್ಲಿ, ಚೌಕಿಯಲ್ಲಿ, ಅನಂತೇಶ್ವರ ದೇವಸ್ಥಾನದಲ್ಲಿ ಹಾಗೂ ಸುತ್ತ ಮುತ್ತಲಿನ ಸಾತ್ವಿಕ ಜನರ ಮನೆಗಳಲ್ಲಿ ಬಿಡಾರ ಹೂಡುತ್ತಿದ್ದರು. ಹಾಗೆಯೇ ಮಕರಸಂಕ್ರಮಣ, ಮಧ್ವನವಮಿ ಇತ್ಯಾದಿ ಬೇರೆ ಬೇರೆ ಸಮಯದಲ್ಲಿಯೂ ಕೂಡ ಪರ ಊರುಗಳಿಂದ ಬಂದವರು ಮೇಲಿನ ರೀತಿಯಲ್ಲಿ ಬಿಡಾರ ಹೂಡುತ್ತಿದ್ದರು. ಹೀಗೆ ಬಂದ ಕೃಷ್ಣಭಕ್ತರು ವೈದಿಕ ಬ್ರಾಹ್ಮಣರೂ, ಆಚಾರವಂತರೂ ಮತ್ತು ಸಂಪ್ರದಾಯಸ್ಥರೂ ಆಗಿರುತ್ತಿದ್ದರು. ತಮ್ಮ ಸ್ನಾನ ಸಂಧ್ಯಾವಂದನ, ನಿತ್ಯಕರ್ಮಗಳನ್ನು ಮುಗಿಸಿ ಹಗಲು–ರಾತ್ರಿಯೆನ್ನದೆ ತಮಗೆ ತಿಳಿದಿರುವ ದೇವರನಾಮಗಳನ್ನು ಅವಿರತವಾಗಿ ಹಾಡುತ್ತಿದ್ದರು. ಇದರಿಂದ ಆಕರ್ಷಿತರಾದ ಗುರುರಾಯರು ಇದನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಕೊಡಬೇಕೆಂದು ಮನವರಿಕೆಯಾಗಿ, ಈ ದೇವರನಾಮ ಪದಗಳ ಪ್ರಕಾಶನವನ್ನು ಕಾರ್ಯೋನ್ಮುಖಗೊಳಿಸಲು ನಿರ್ಧರಿಸಿದರು.

ಶ್ರೀ ಗುರುರಾಯರು ಸಾತ್ವಿಕರು. ಅತಿಥಿ ಸತ್ಕಾರಕ್ಕೆ ಎತ್ತಿದ ಕೈ. ಆಚಾರ ನಿಷ್ಠ ಬ್ರಾಹ್ಮಣರು ಯಾರೇ ಬಂದರೂ ತಮ್ಮ ಮನೆಯಲ್ಲಿ ಅತಿಥಿ ಸತ್ಕಾರ ಮಾಡುತ್ತಿದ್ದರು. ಹಾಗೆ ಬಂದ ಅತಿಥಿಗಳಿಂದ ದೇವರನಾಮವನ್ನು ಹಾಡಿಸಿ ಅದನ್ನು ಅವರ ಹೆಣ್ಣುಮಕ್ಕಳಿಂದ ಬರೆಸಿಕೊಳ್ಳುತ್ತಿದ್ದರು. ತಮ್ಮ ಗ್ರಂಥಪ್ರಕಾಶನವನ್ನು ಆರಂಭದಲ್ಲಿ ಗುರುರಾಯರು ಹವ್ಯಾಸವಾಗಿ ಮಾಡುತ್ತಿದ್ದರು. ಈ ಕಾರ್ಯದ ಅಗಾಧತೆಯನ್ನು ಅರಿತು ಅದನ್ನೇ ತಮ್ಮ ಮುಖ್ಯ ಕಾರ್ಯವನ್ನಾಗಿ ಪರಿವರ್ತಿಸಿಕೊಂಡರು.

ಕೀರ್ತನೆಗಳನ್ನು ಶ್ರೀ ಪಾವಂಜೆ ಗುರುರಾಯರು ಉಡುಪಿಗೆ ಬರುತ್ತಿದ್ದ ಮಾಧ್ವ ಯಾತ್ರಿಕರಿಂದ, ಮುಖ್ಯವಾಗಿ ಮಹಿಳೆಯರಿಂದ ಸಂಗ್ರಹಿಸಿದರೆಂದೂ, ಉತ್ತರ ಕರ್ನಾಟಕದ ವಿವಿಧ ಪ್ರದೇಶಗಳಿಗೆ ಸೇರಿದ ಉಪಲಬ್ಧ ಹಸ್ತಪ್ರತಿಗಳನ್ನು ಉಪಯೋಗಿಸಿಕೊಂಡರೆಂದೂ, ಸ್ಥಳೀಯವಾಗಿ ದೊರಕಿದ ಆಕರಗಳನ್ನು ಬಳಸಿಕೊಂಡರೆಂದೂ ತಿಳಿದುಬರುತ್ತದೆ. ಈ ಕಾರ್ಯಕ್ಕೆ ಅವರು ಆ ಕಾಲದ ವಿದ್ವಾಂಸರ ಸಹಾಯನ್ನು ಪಡೆದಿರಬೇಕು. ಅವರಿಂದ ಕೀರ್ತನೆಗಳನ್ನು ಆದಷ್ಟು ಶುದ್ಧೀಕರಿಸಿ, ಸರಿಗೊಳಿಸಿ ಅವರು ಪ್ರಕಟಿಸಿದರೆಂದು ತಿಳಿದುಬರುತ್ತದೆ.

ಶ್ರೀಯುತ ಎಸ್.ಕೆ. ಶ್ರೀಪತಿ ಆಚಾರ್ಯರು ಗುರುರಾಯರ ಸಾಧನೆಯ ಮಹತ್ವವನ್ನು ಹೀಗೆ ಮಾರ್ಮಿಕವಾಗಿ ವರ್ಣಿಸುತ್ತಾರೆ. "ಈ ದಾಸರ ಪದಗಳು ಜನರ ಬಾಯ್ಮಾತಿನಲ್ಲಿ ಬಳಕೆಯಾಗಿರುವ ಹಾಡುಗಳನ್ನು ಅವರ ಮನವೊಲಿಸಿ, ಹಾಡಿಸಿ ಮತ್ತು ಕೇಳಿದಂತೆ ಬರೆಯಿಸಿ, ತಪ್ಪು ತಡೆಗಳಿದ್ದರೆ ಸರಿಪಡಿಸಿ ಅವುಗಳನ್ನು ಮುದ್ರಿಸಿ ಪ್ರಕಾಶಪಡಿಸಿದುದು ಪಾವಂಜೆ ಗುರುರಾಯರ ಸಾಹಸವಲ್ಲದೆ ಮತ್ತಿನ್ನೇನು? ಆದುದರಿಂದಲೇ ಶ್ರೀ ರಾಯರು ಕರ್ನಾಟಕದ ಮನೆಮಾತಿನ ಮಹನೀಯರಾಗಿ ಮೆರೆದರು. ಅವರೇನು ಕವಿಗಳಲ್ಲ, ರಾಜಕೀಯ ಧುರೀಣರಲ್ಲ ಅಥವಾ ಶ್ರೀಮಂತ ಉದ್ದಿಮೆದಾರರೂ ಅಲ್ಲ. ಆದರೆ ಕೀರ್ತಿಕಾಮನೆಗಳಿಗೆ ಬಲಿಯಾಗದೆ ಎಲೆಮರೆಯ ಕಾಯಿಯಂತೆ ಕೀರ್ತಿವಂತರಾಗಿ ಬಾಳಿ ಬೆಳಗಿದವರು."

**ಶ್ರೀ ಪಾವಂಜೆ ಗುರುರಾಯರು ಮಾಡಿದ ಸಾರಸ್ವತ ಸೇವೆ:**

ಶ್ರೀ ಪಾವಂಜೆ ಗುರುರಾಯರು ಮಾಡಿದ ಜ್ಞಾನಪ್ರಸಾರ ಕಾರ್ಯವನ್ನು ನಾಲ್ಕು ಮುಖ್ಯ ಘಟ್ಟಗಳಾಗಿ ಪರಿಶೀಲಿಸಬಹುದು.

- ಮೊದಲನೆಯದು ನಿತ್ಯಾನುಷ್ಠಾನಕ್ಕೆ ಬೇಕಾದ ಸ್ತೋತ್ರ ಸಾಹಿತ್ಯದ ಪ್ರಕಟನೆ.
- ಎರಡನೆಯದು ಹೆಣ್ಣುಮಕ್ಕಳ ಹಾಡು.
- ಮೂರನೆಯದು ಜನಪದ ಸಾಹಿತ್ಯವಾದ ಯಕ್ಷಗಾನ ಗ್ರಂಥಗಳ ಪ್ರಕಟನೆ.
- ನಾಲ್ಕನೆಯದು ಹರಿದಾಸ ಸಾಹಿತ್ಯದ ಸಂಗ್ರಹ, ಸಂಶೋಧನೆ, ಪ್ರಕಟನೆ ಮತ್ತು ಮಾರಾಟ.

ಇವುಗಳಲ್ಲಿ ಅವರು ಮುಟ್ಟಿದ್ದನ್ನು ತಮ್ಮ ಸತತ ಪರಿಶ್ರಮದಿಂದಾಗಿ, ತಪಸ್ಸಿನಿಂದಾಗಿ ಹೊನ್ನಾಗಿಸಿದರು. ಅದನ್ನು ಪೂರ್ಣತೆಯ ಕಡೆಗೆ ಒಯ್ದರು. ಒಂದು ಸಂಸ್ಥೆ, ನೂರಾರು ಜನ ವಿದ್ವಾಂಸರ ಸಹಾಯದಿಂದ ಮತ್ತು ಅಧಿಕ ಹಣದ ಬೆಂಬಲದಿಂದ ಮಾಡಬಹುದಾಗಿದ್ದ ಕೆಲಸವನ್ನು ಗುರುರಾಯರು ಏಕಾಂಗಿಯಾಗಿ, ಬೇರೆಯವರಿಂದ ಹಣಕಾಸಿನ ನೆರವು ಪಡೆಯದೇ, ಮುದ್ರಣ ಸೌಕರ್ಯವಾಗಲೀ ಪ್ರಕಾಶಕರಾಗಲೀ ಇಲ್ಲದಿದ್ದ ಕಾಲದಲ್ಲಿ ಸದ್ದುಗದ್ದಲಗಳಿಲ್ಲದೆ, ಕೇವಲ ಸೇವಾ ಮನೋಭಾವದಿಂದ ನಡೆಸಿಕೊಂಡು ಬಂದರು. ಇದು ಅವರು

ಮಾಡಿದ ಮಹತ್ಕಾರ್ಯ.

ಗುರುರಾಯರಿಗೆ ಸಂಸ್ಕೃತ, ಇಂಗ್ಲೀಷ್, ಮಲಯಾಳಂ, ತುಳು, ಕನ್ನಡ, ಹಿಂದೂಸ್ಥಾನಿ ಭಾಷೆಗಳು ಚೆನ್ನಾಗಿ ಬರುತ್ತಿತ್ತು. ತೆಲುಗು, ಮರಾಠಿ ಹಾಗು ತಮಿಳನ್ನು ಅರ್ಥ ಮಾಡಿಕೊಳ್ಳಬಲ್ಲವರಾಗಿದ್ದರು. ಸಾಹಿತ್ಯವನ್ನು ಚೆನ್ನಾಗಿ ಬಲ್ಲ ವಿದ್ವಾಂಸರಿಂದ ಆಯಾ ಪ್ರಕಾರದ ಸಾಹಿತ್ಯವನ್ನು ಕೊಟ್ಟು ತಿದ್ದಿಸಿ, ಒಪ್ಪಗೊಳಿಸಿ, ತಪ್ಪಿಲ್ಲದಂತೆ ಮುದ್ರಿಸುವುದು ಅವರಿಗೆ ಪ್ರಿಯವಾದ ಕಾರ್ಯವಾಗಿತ್ತು. ಪುಸ್ತಕದ ಮುದ್ರಣ ಪಾವಂಜೆಯವರ ಪಾಲಿಗೆ ಒಂದು ವ್ರತವಾಗಿದ್ದಂತೆ ಪೂಜೆಯೂ ಆಗಿತ್ತು. ಗ್ರಂಥಗಳ ಮುದ್ರಣದ ಅಚ್ಚುಕಟ್ಟು, ಶುದ್ಧತೆ, ಒಪ್ಪ ಓರೆಗಳ ಕಡೆಗೆ ಅವರು ತುಂಬಾ ಗಮನ ಕೊಡುತ್ತಿದ್ದರು.

ಗುರುರಾಯರು ಗೋರಖಪುರದ ಗೀತಾ ಪ್ರೆಸ್ಸಿನ ಹನುಮಾನ್ ಪ್ರಸಾದ್ ಪೋದ್ದಾರರನ್ನು ಆದರ್ಶವಾಗಿಸಿಕೊಂಡಿದ್ದರು. ಪುಟಕ್ಕೆ ತಕ್ಕ ಬೆಲೆ, ಗ್ರಂಥದ ಗಾತ್ರಕ್ಕೆ ತಕ್ಕ ಮುದ್ರಣ ವಿನ್ಯಾಸ, ಹೊರ ರಕ್ಷಾ ಕವಚ ಇರುತ್ತಿತ್ತು. ಶ್ರೀ ಪಾವಂಜೆ ಗುರುರಾಯರು ಈ ಬಗ್ಗೆ ಒಂದು ಸೂತ್ರ ಹಾಕಿಕೊಂಡು ನಡೆಯುತ್ತಿದ್ದರು. ಗ್ರಂಥದ ಬೆಲೆ ಎಲ್ಲರ ಕೈಗೆಟುಕುವಂತೆ ಅತ್ಯಂತ ಸುಲಭ ದರದಲ್ಲಿ ಇರಬೇಕೇ ಹೊರತು, ಗ್ರಂಥದ ಮೌಲ್ಯ ಮಾತ್ರ ಯಾವಾಗಲೂ ತೂಕದ್ದೂ, ಬೆಲೆಯುಳ್ಳದ್ದೂ ಆಗಿರಬೇಕು ಎಂದು ಹೇಳುತ್ತಿದ್ದರು.

ಶ್ರೀ ಪಾವಂಜೆ ಗುರುರಾಯರು ತಮ್ಮ ಕಾಲದಲ್ಲಿ ಒಂದು ವಿಕ್ರಮವನ್ನು ಸಾಧಿಸಿದರು. ಪ್ರಕಟಣಾ ಪ್ರಪಂಚದಲ್ಲಿ ಪವಾಡವೇ ಮಾಡಿದರು. ಅವರು ಪ್ರಕಟಿಸಿದ ಗ್ರಂಥಗಳು ಒಂದಾಣೆ (ಅಂದಿನ ಒಂದಾಣೆ ಆರು ಪೈಸೆಗೆ ಸಮಾನ) ಬೆಲೆಯಿಂದ ಆರಂಭಗೊಂಡು ಹತ್ತು ರೂಪಾಯಿಗಳವರೆಗೆ ಇರುತ್ತಿತ್ತು. ಹತ್ತು ಪುಟಗಳ ಸಾಹಿತ್ಯದಿಂದ ತೊಡಗಿ ಸಹಸ್ರ ಪುಟಗಳವರೆಗೆ ವ್ಯಾಪಿಸಿರುತ್ತಿತ್ತು. ಹೀಗಾಗಿ ಅನೇಕ ಗ್ರಂಥಗಳು ಅನೇಕ ಬಾರಿ ಮರುಮುದ್ರಣಗಳನ್ನು ಕಂಡವು ಮತ್ತು ಕೆಲವು ಅಚ್ಚಾಗುತ್ತಿದ್ದಂತೆಯೇ ಮಾರಾಟವಾಗಿ ಹೋಗುತ್ತಿತ್ತು.

ಮುಂದೆ ಪ್ರಕಟಣಾ ಕಾರ್ಯದಲ್ಲಿ ಯಶಸ್ಸನ್ನು ಕಂಡ ಗುರುರಾಯರು, ಅತ್ಯಂತ ಸುವ್ಯವಸ್ಥಿತ ರೀತಿಯಲ್ಲಿ ತಮ್ಮ ಕಾರ್ಯವನ್ನು ನಡೆಸಲು ತಮ್ಮದೇ ಆದ ಮುದ್ರಣಾಲಯವನ್ನು ಪ್ರಾರಂಭಿಸಲು ಯೋಚಿಸಿದರು. ಅದರಂತೆ ಉಡುಪಿಯಲ್ಲಿ

ಸ್ವಂತ ಜಾಗವನ್ನು ಖರೀದಿಸಿ, ಅಂದಿನಕಾಲದ ಅತ್ಯಾಧುನಿಕ ಯಂತ್ರಗಳಿಂದ ಕೂಡಿದ ಶ್ರೀಕೃಷ್ಣ ಮುದ್ರಣಾಲಯವನ್ನು ಪ್ರಾರಂಭಿಸಿದರು. ಮುದ್ರಣಗೊಂಡ ಪುಸ್ತಕಗಳ ಸುವ್ಯವಸ್ಥಿತ ರೀತಿಯಲ್ಲಿ ಪ್ರಕಾಶನ ಮತ್ತು ಮಾರಾಟಕ್ಕಾಗಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ (ಎಸ್.ಎಂ.ಎಸ್. ಗ್ರಂಥಾಲಯ) ಎಂಬ ಪುಸ್ತಕದ ಅಂಗಡಿಯನ್ನು ಉಡುಪಿಯ ರಥಬೀದಿಯಲ್ಲಿ (ಶ್ರೀ ಪೇಜಾವರ ಮಠದ ಬಾಡಿಗೆಯ ಕಟ್ಟಡವೊಂದರಲ್ಲಿ) ತೆರೆದರು. ತಮ್ಮ ಅವಿರತ ಪರಿಶ್ರಮದಿಂದ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ ಕೀರ್ತಿಪತಾಕೆಯನ್ನು ಉತ್ತುಂಗ ಶಿಖರಕ್ಕೇರಿಸಿದರು. ಅಂದಿನ ಕಾಲದಲ್ಲಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ ಹೆಸರನ್ನು ಕೇಳದ ಕನ್ನಡಿಗನೇ ವಿರಳ ಎಂಬಂತೆ ಮಾಡಿದರು.

ಹೀಗೆ ಗುರುರಾಯರು ಲೇಖನಗಳನ್ನು ಸಿದ್ಧಗೊಳಿಸುವ ಗ್ರಂಥ ಸಂಗ್ರಹಕಾರರಾಗಿ ಪ್ರಾರಂಭಿಸಿ, ಕೊನೆಗೆ ಸುವ್ಯವಸ್ಥಿತ ಪ್ರಕಾಶನ, ಮುದ್ರಣ, ಮಾರಾಟದ ಸಂಚಾಲಕರೂ ಆದರು.

**ಹರಿದಾಸ ಸಾಹಿತ್ಯಕ್ಕೆ ಶ್ರೀ ಪಾವಂಜೆ ಗುರುರಾಯರ ಕೊಡುಗೆಗಳು:**

ಇಂದು ಶ್ರೀ ಪಾವಂಜೆ ಗುರುರಾಯರ ಕೀರ್ತಿಯ ಕಳಶವಾಗಿ ನಿಂತಿರುವುದು ಅವರು ದಾಸ ಸಾಹಿತ್ಯಕ್ಕೆ ಮಾಡಿದ ಅನುಪಮ ಸೇವೆ. ಹರಿದಾಸ ಸಾಹಿತ್ಯವನ್ನು ಇತೋಪ್ಯತಿಶಯವಾಗಿ ಬೆಳೆಸಿದ, ಪ್ರಚಾರ ಮಾಡಿದ ಪ್ರಾತಃಸ್ಮರಣೀಯರಲ್ಲಿ ಮೊದಲಿಗರು.

ಶ್ರೀ ಪಾವಂಜೆಯವರು ಸಂಪಾದಿಸಿದ ಕೃತಿಗಳ ಬಗ್ಗೆ ಬಂದ ಒಂದು ಆಕ್ಷೇಪಣೆಯೆಂದರೆ ಅವರ ಕೃತಿಗಳು ಅಶುದ್ಧ ರೂಪದಲ್ಲಿವೆ, ಅಪೂರ್ಣವಾಗಿವೆ, ಅಂಕಿತಗಳ ಮಿಶ್ರಣವಾಗಿದೆ, ಹಲವು ದಾಸರ ಕೃತಿಗಳಲ್ಲಿ ಅಂಕಿತ ಪಲ್ಲಟವಾಗಿವೆ ಎಂದೆಲ್ಲ ಹೇಳುವುದುಂಟು. ಆದರೆ ಶ್ರೀ ಪಾವಂಜೆ ಗುರುರಾಯರು ಈ ಸಾಹಿತ್ಯವನ್ನು ಸಂಗ್ರಹಿಸುವಾಗ ಇದ್ದ ಅಡೆ–ತಡೆಗಳನ್ನು ಗಮನಿಸಬೇಕಾದ್ದು ಅಗತ್ಯ. ಆಗಿನ್ನೂ ಈ ದಾಸಸಾಹಿತ್ಯದ ಕೃತಿಗಳು ಅಚ್ಚಿನ ಮುಖ ಕಂಡಿರಲಿಲ್ಲ, ಗ್ರಂಥಗೊಳಿಸಲ್ಪಟ್ಟಿರಲಿಲ್ಲ. ಕೇವಲ ಹೆಣ್ಣು ಮಕ್ಕಳ ನಾಲಿಗೆಯ ಮೇಲೆ ಮತ್ತು ಹರಿದಾಸರ ತುಟಿಗಳಲ್ಲಿ ಮಾತ್ರ ನಲಿಯುತ್ತಿದ್ದವು. ಬಾಯಿಂದ ಬಾಯಿಗೆ ಸಂಪ್ರದಾಯಬದ್ಧವಾಗಿ ಹರಿದು ಬಂದಿದ್ದ ಹಾಡುಗಬ್ಬಗಳು ದೇಶ ಕಾಲ

ಸಂಪ್ರದಾಯಗಳಿಗೆ ಸಿಕ್ಕಿ ವಿರೂಪಗೊಂಡಿದ್ದವು. ಬರಹ ಕಾಣದಿದ್ದ ಈ ಸಾಹಿತ್ಯ ರಾಶಿಯನ್ನು ಪ್ರಥಮ ಬಾರಿಗೆ ಬರೆದುಕೊಂಡು, ತಾಳೆಗರಿಯಲ್ಲಿ ಬರೆದಿಟ್ಟ ಕೃತಿಗಳನ್ನು ನೋಡಿ ಶುದ್ಧ ಪಾಠ ನಿರ್ಣಯಿಸುವುದು ಕಷ್ಟಸಾಧ್ಯವಾಗಿತ್ತು. ಇಂಥ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಅವರು ಅಳಿದುಳಿದ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಗ್ರಂಥಸ್ಥಗೊಳಿಸಲು ಸಂಕಲ್ಪ ಮಾಡಿದ್ದು ದೊಡ್ಡ ಸಾಹಸವೇ ಸರಿ. ಶ್ರೀ ಪಾವಂಜೆ ಗುರುರಾಯರ ಈ ಭಗೀರಥ ಪ್ರಯತ್ನವು ಮುಂದಿನ ಹರಿದಾಸ ಸಾಹಿತ್ಯ ಸಂಶೋಧಕರ ಹಾದಿಯನ್ನು ಸುಗಮಗೊಳಿಸಿತು. ಅವರಿಗೆ ಪಾಠದ ಶುದ್ಧತೆಯ ಬಗ್ಗೆ, ಅಂಕಿತದ ಬಗ್ಗೆ ಮತ್ತು ಇನ್ನಿತರ ಸೂಕ್ಷ್ಮಗಳ ಬಗ್ಗೆ ಹೆಚ್ಚು ಗಮನ ಕೊಡಲು ಅನೂಕೂಲವಾಯಿತು.

**ಶ್ರೀ ಪಾವಂಜೆ ಗುರುರಾಯರಿಂದ ಪ್ರಕಟಿತ ಹರಿದಾಸ ಸಾಹಿತ್ಯ ಗ್ರಂಥಗಳು :**

ಹರಿದಾಸ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವಿದೆ. ಹರಿದಾಸ ಸಾಹಿತ್ಯ ಮತ್ತು ವಚನ ಸಾಹಿತ್ಯ ಕನ್ನಡಾಂಬೆಯ ಎರಡು ಕಣ್ಣುಗಳು ಎನ್ನುವುದು ವಾಡಿಕೆ. ಶ್ರೀ ಪಾವಂಜೆ ಗುರುರಾಯರು ಪ್ರಕಟಿಸಿದ ದಾಸಸಾಹಿತ್ಯದ ಸಮೀಕ್ಷೆ ಮಾಡುವುದಾದರೆ, ಕೆಲವು ಪ್ರಮುಖ ಅಂಶಗಳು ಎತ್ತಿ ತೋರುತ್ತವೆ:

1. **ಪುರಂದರದಾಸರ ಕೀರ್ತನೆಗಳು** : ಐದು ಸಂಪುಟಗಳಲ್ಲಿ ಪ್ರಕಟವಾಯಿತು. ಈ ಐದು ಭಾಗಗಳ ಪೈಕಿ ಮೊದಲನೆಯದು 1917ರಲ್ಲಿಯೂ ಐದನೆಯದು 1932ರಲ್ಲಿಯೂ ಮೊದಲ ಬಾರಿಗೆ ಮುದ್ರಿತವಾಯಿತು. ಇಲ್ಲಿ ದೊರೆಯುವ ಕೀರ್ತನೆಗಳ ಸಂಖ್ಯೆ 983, ಅಚ್ಚಾದ ಪುಟಗಳ ಸಂಖ್ಯೆ 579. ಇದರಲ್ಲಿ ಐದನೆಯ ಭಾಗದ ಕೊನೆಯಲ್ಲಿ ಪುರಂದರದಾಸರ ಉಗಾಭೋಗಗಳು ಎಂಬ ಶೀರ್ಷಿಕೆಯ ಅಡಿಯಲ್ಲಿ 143 ಉಗಾಭೋಗಗಳನ್ನೂ ಶ್ರೀಗುರುರಾಯರು ಛಾಪಿಸಿ ಪ್ರಕಟಿಸಿದ್ದಾರೆ.

2. **ಪುರಂದರದಾಸರ ಸುಳಾದಿಗಳು** (ಎರಡು ಭಾಗ) : 1927ರಲ್ಲಿ ಇದರ ಮೊದಲ ಭಾಗವು ಪ್ರಕಟಿಸಲ್ಪಟ್ಟಿತು. ಈ ಮೊದಲ ಭಾಗದಲ್ಲಿ 72 ಸುಳಾದಿಗಳಿದ್ದು, 100 ಪುಟಗಳಲ್ಲಿ ಮುದ್ರಿತವಾಗಿದೆ. ಇಲ್ಲಿ ಮುದ್ರಿಸಲ್ಪಟ್ಟ ಸುಳಾದಿಗಳ ಶುದ್ಧತೆಯ ಬಗ್ಗೆ ಶ್ರೀಪಾವಂಜೆ ಗುರುರಾಯರಿಗೇ ಅಷ್ಟೊಂದು ಸಮಾಧಾನವಿರಲಿಲ್ಲ ಎಂದು ಅವರು ಬರೆದಿರುವ ಪ್ರಸ್ತಾವನೆಯಿಂದ

ತಿಳಿದು ಬರುತ್ತದೆ. ಅವರು ಬರೆಯುತ್ತಾರೆ –

"ಪುರಂದರದಾಸರು ಕೀರ್ತನೆಗಳಂತೆ ಸುಳಾದಿಗಳನ್ನೂ ರಚಿಸಿದ್ದಾರೆ. "ಸುಳಿದರೆ ಸುಳಾದಿ" ಎಂಬ ದಾಸಕೂಟದವರ ಗಾದೆಯಿಂದ ಶ್ರೀಹರಿಯು ಕಣ್ಣೆದುರು ಸುಳಿದಾಗ ರಚಿಸಿದ ಕೀರ್ತನೆಗಳೇ ಸುಳಾದಿಗಳೆಂದು ತಿಳಿದು–ಬರುವುದರಿಂದ ಇವುಗಳಲ್ಲಿ ಅತಿಮಹತ್ವವಿದೆ.

ಆದರೆ ಆ ಸುಳಾದಿಗಳಿವೆಯೆಂದು ಕೇಳುತ್ತಿದ್ದರೂ ಈ ವರೆಗೆ ದೊರಕದಿದ್ದು ದೈವಯೋಗದಿಂದ ಅತಿಜೀರ್ಣಪ್ರತಿಯೊಂದು ಕೈಸೇರಿ ಅದರಲ್ಲಲ್ಲಿ ವರಳೆಹಿಡಿದು ಕೆಲವಕ್ಷರ ಕಾಣದೆಯಿದ್ದರೂ ಇದ್ದಷ್ಟನ್ನಾದರೂ ಪ್ರಕಟಿಸದಿದ್ದರೆ ಗ್ರಂಥವೇ ಇಲ್ಲದಂತಾದೀತೆಂದು ಛಾಪಿಸಿರುತ್ತೇವೆ. ಅಕ್ಷರ ತೋರದಿದ್ದಲ್ಲಿ... ಈ ಗುರುತುಗಳನ್ನು ಕೊಟ್ಟಿದ್ದೇವೆ. ಈ ಸುಳಾದಿಗಳ ನಡುವೆ ಅಲ್ಲಲ್ಲಿ ಪ್ರಾಸಗಳು ಕಾಣದಿದ್ದರೂ ಶ್ರೀಪುರಂದರದಾಸರ ಸಾಕ್ಷಾತ್ ಶಿಷ್ಯರಾದ ಶ್ರೀವಿಜಯದಾಸರೇ "ಅವರಂದ ವಚನವೆಲ್ಲ ವೇದಾರ್ಥವಿದೆ" ಎಂದು ತಮ್ಮ ಗುರುಕೀರ್ತನಸ್ತುತಿಯಲ್ಲಿ ಆ ಗುರುವಚನ ವೇದವಚನ ಸಮವೆಂದು ಹೇಳಿದ್ದರಿಂದ ಯಾವ ದೋಷಾರೋಪಣೆಯೂ ಈ ಗುರೂಕ್ತಿಗಳಿಗೆ ಯುಕ್ತವಲ್ಲ. ಈ ಸುಳಾದಿಗಳು ಮಾತ್ರವಲ್ಲದೆ ಅದೇ ಪುಸ್ತಕದಲ್ಲಿ ದೊರಕಿದ ಬೇರೆ ಬೇರೆ ನರಹರಿಕೃಷ್ಣ, ಅಂಬೆಗಾಲುಕೃಷ್ಣ, ಅಚಲಾನಂದವಿಠಲ,ಯೋಗೀಂದ್ರವಿಠಲ,ವರದಕೇಶವ,ಚನ್ನಕೇಶವವಿಠಲ, ಗುರುಮಧ್ವಪತಿ, ಶ್ರೀಪತಿವರದ, ನಂದವರದರಾಜ ಇತ್ಯಾದ್ಯಂಕಿತಗಳುಳ್ಳ ಸುಳಾದಿಗಳೂ ಅಪೂರ್ವಗಳೆಂದು ಇವುಗಳೊಡನೆ ಮುದ್ರಿಸಲ್ಪಟ್ಟಿದ್ದರೂ ಹೆಚ್ಚಾಗಿಯೂ, ಮುಖ್ಯವಾಗಿಯೂ ಶ್ರೀಪುರಂದರದಾಸರ ಸುಳಾದಿಗಳೇ ಇದರಲ್ಲಿರುವುದರಿಂದ "ಶ್ರೀಪುರಂದರದಾಸರ ಸುಳಾದಿಗಳು" ಯೆಂದೇ ಈ ಗ್ರಂಥಕ್ಕೆ ಹೆಸರನ್ನಿಟ್ಟಿದ್ದೇವೆ.

ಶೋಧನದಲ್ಲಾದಷ್ಟು ಯತ್ನಿಸಿದ್ದರೂ ದೊಡ್ಡವರ ಉಕ್ತಿಗಳನ್ನು ಮನಗಂಡಂತೆ ಬದಲಾಯಿಸುವುದರಿಂದಲೂ ಇದ್ದಹಾಗೆ ಇಡುವುದು ಲೇಸೆಂದು ಹಾಗೆಯೇ ಮುದ್ರಿಸಿದ್ದೇವೆ. ಇತರ ಶುದ್ಧಪ್ರತಿಗಳು ಯಾರಲ್ಲಾದರೂ ಇದ್ದರೆ ಅವುಗಳನ್ನು ನಮಗೆ ದಯವಿಟ್ಟು ಕಳುಹಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸುತ್ತೇವೆ."

3. **ಶ್ರೀ ವಾದಿರಾಜರ ಕೀರ್ತನೆಗಳು** : ಪ್ರಥಮ ಭಾಗವು 1920 ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ಕೃತಿಗಳ ಸಂಖ್ಯೆ 152. ಪುಟಗಳ ಸಂಖ್ಯೆ 107. ಇದು 1925ರಲ್ಲಿ ದ್ವಿತೀಯಾವೃತ್ತಿ ಕಂಡಿತು. ದ್ವಿತೀಯಾವೃತ್ತಿಯಲ್ಲಿ ಹೆಚ್ಚಿನ ಪದ್ಯಗಳನ್ನು ಸೇರಿಸಲಾಯಿತು. ಇದರಲ್ಲಿ ಮುದ್ರಿತ ಕೀರ್ತನೆಗಳ ಸಂಖ್ಯೆ 161. ಪುಟಗಳ ಸಂಖ್ಯೆ 117.

4. **ಕನಕದಾಸರ ಕೀರ್ತನೆಗಳು** : 1918ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ಪ್ರಥಮ ಭಾಗದ ಕೃತಿಗಳ ಸಂಖ್ಯೆ 152. ಪುಟಗಳ ಸಂಖ್ಯೆ 162. ಇದಕ್ಕೆ ಶ್ರೀಗುರುರಾಯರ ಮಿತ್ರರಾದ ಶ್ರೀಯುತ ನಾ. ಭೀ. ಕಲಮದಾನೀ ಹಿರಿಯೂರು, ಅವರು ಸಂಕ್ಷಿಪ್ತ ಪ್ರಸ್ತಾವನೆಯನ್ನು ಬರೆದಿದ್ದರು. 1948 ರಲ್ಲಿ ಈ ಗ್ರಂಥವು ಆರನೆಯ ಅಚ್ಚನ್ನು ಕಂಡಿತು. ಆರನೇಯ ಅಚ್ಚಿನಲ್ಲಿ ಒಟ್ಟು 225 ಕೀರ್ತನೆಗಳಿದ್ದವು. ಅಚ್ಚರಿಯ ಸಂಗತಿಯೆಂದರೆ ಈ ಪುಸ್ತಕವು "ಕನಕದಾಸ ಅಧ್ಯಯನ ಮತ್ತು ಸಂಶೋಧನ ಪೀಠ", ಎಂ.ಜಿ.ಎಂ. ಕಾಲೇಜ್, ಉಡುಪಿ ಇವರಿಂದ 2015ರಲ್ಲಿ ಮತ್ತು ಮಂಗಳೂರು ವಿಶ್ವವಿದ್ಯಾನಿಲಯದಿಂದ 2019ರಲ್ಲಿ ಮರುಮುದ್ರಣಗೊಂಡು ಪ್ರಕಟಿಸಲಾಯಿತು.

5. **ವಿಜಯದಾಸರ ದೇವರನಾಮಗಳು** : ಎರಡು ಭಾಗಗಳಲ್ಲಿ 1918 ಮಾತ್ತು 1929ರಲ್ಲಿ ಪ್ರಕಟವಾಯಿತು. ಒಟ್ಟು ಕೃತಿಗಳು 160. ಪುಟಗಳ ಸಂಖ್ಯೆ 199.

6. **ವಿಜಯದಾಸರ ಸುಳಾದಿಗಳು** : ಎರಡು ಭಾಗಗಳಲ್ಲಿ 1929ರಲ್ಲಿ ಪ್ರಕಟವಾಯಿತು. ಕೃತಿಗಳ ಸಂಖ್ಯೆ 316, ಪುಟಗಳ ಸಂಖ್ಯೆ 129.

7. **ಗೋಪಾಲದಾಸರ ಕೃತಿಗಳು** : ಪ್ರಕಟಣೆ 1923, ಕೃತಿಗಳು 100, ಪುಟಗಳ ಸಂಖ್ಯೆ 106.

8. **ಜಗನ್ನಾಥದಾಸರ ಕೃತಿಗಳು, ಭಾಗ–1** : ಪ್ರಕಟಿತ ವರ್ಷ 1919, ಕೃತಿಗಳ ಸಂಖ್ಯೆ 132, ಪುಟಗಳ ಸಂಖ್ಯೆ 158. ಇದು 1926ರಲ್ಲಿ ತೃತೀಯಾವೃತ್ತಿ ಕಂಡು, ಅದರ ಉಪೋದ್ಘಾತದಲ್ಲಿ ಶ್ರೀಪಾವಂಜೆ ಗುರುರಾಯರು ಬರೆಯುತ್ತಾರೆ – "1919ನೆ ಇಸವಿಯಲ್ಲಿ ಛಾಪಿಸಿದ ಪ್ರಥಮಾವೃತ್ತಿಯಲ್ಲಿ

ಬಹಳ ತಪ್ಪುಗಳು ಇದ್ದದ್ದರಿಂದ ಮಹನೀಯರಾದ ಮಹಾರಾಜಶ್ರೀ ನಾರಾಯಣ ರಾವ್ ಭೀಮರಾವ್ ಕಲಮದಾನಿ ಹಾವೇರಿ, ಇವರು ಆ ತಪ್ಪುಗಳನ್ನೆಲ್ಲ ತಿದ್ದಿ ಸರಿಪಡಿಸಿಕೊಟ್ಟಕ್ರಮವಾಗಿ ದ್ವಿತೀಯ ಮುದ್ರಣವನ್ನು ಬಹಳಮಟ್ಟಿಗೆ ಶುದ್ಧವಾಗಿಯೇ ಮುದ್ರಿಸಿದಂತೆ, ಈ ತೃತೀಯ ಮುದ್ರಣವು ಸಾಧಿಸಲ್ಪಟ್ಟಿದೆ. ಈ ಮೂರನೆಯ ಮುದ್ರಣದಲ್ಲಿ ಹೊಸದಾಗಿ ದೊರೆತ ಕೆಲವು ಕೀರ್ತನೆಗಳನ್ನೂ, ನದಿಗಳ ತಾರತಮ್ಯ, ನದಿಗಳಸ್ತೋತ್ರ, ಬೃಹತ್ತಾರತಮ್ಯ, ತಂತ್ರಸಾರ ಇವರು ರಚಿಸಿರುವ ಮೂರು ಸುಳಾದಿಗಳನ್ನೂ ಸೇರಿಸಿಯದೆ." ಈ ಮೂರನೆ ಆವೃತ್ತಿಯಲ್ಲಿ 155 ಕೀರ್ತನೆಗಳೂ, ಮೂರು ಸುಳಾದಿಗಳೂ, 132 ಪುಟಗಳಲ್ಲಿ ಮುದ್ರಿತವಾಗಿದೆ.

9. **ಶ್ರೀಪಾದರಾಯರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು, ಸುಳಾದಿಗಳು**: ಪ್ರಕಟಿತ ವರ್ಷ 1924. ಈ ಪುಸ್ತಕದಲ್ಲಿ ಒಟ್ಟು ಶ್ರೀಪಾದರಾಜರ 50 ಕೃತಿಗಳು ಮತ್ತು ಶ್ರೀವ್ಯಾಸರಾಯರ 68 ಕೀರ್ತನೆಗಳನ್ನು ಒಳಗೊಂಡಿದ್ದುದ್ದಲ್ಲದೆ, ಶ್ರೀವ್ಯಾಸರಾಯರ 10 ಸುಳಾದಿಗಳನ್ನೂ ಸೇರಿಸಲಾಗಿತ್ತು. ಮುದ್ರಿತ ಪುಟಗಳ ಸಂಖ್ಯೆ 86.

   ಈ ಗ್ರಂಥವನ್ನು ಶ್ರೀಯುತ ಯು. ವಾಸುದೇವಾಚಾರ್ಯ ಎಂಬುವವರ ಸಹಾಯದಿಂದ ಸಂಗ್ರಹಿಸಲಾಯಿತು ಎಂದು ತಿಳಿದುಬರುತ್ತದೆ. ಇದರ ಪ್ರಸ್ತಾವನೆಯಲ್ಲಿ ಶ್ರೀಪಾವಂಜೆ ಗುರುರಾಯರು ಬರೆಯುತ್ತಾರೆ "ದಾಸಕೂಟದ ಆದಿಪುರುಷರೆನಿಸಿದ ಈ ಗುರುಶಿಷ್ಯರಾದ ಮಹಾತ್ಮರ ವಚನಾಮೃತಗಳನ್ನು ಶ್ರಮಪಟ್ಟು ಯಥಾಶಕ್ತಿ ಸಂಗ್ರಹಿಸಿ – ಶ್ರೀಪಾದರಾಯರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು, ಸುಳಾದಿಗಳು ಎಂಬ ಈ ಚಿಕ್ಕ ಗ್ರಂಥವನ್ನು ಪ್ರಕಟಿಸಿರುತ್ತೇನೆ. ಈ ಗ್ರಂಥಶೋಧನದಲ್ಲಿ ಶ್ರಮಪಟ್ಟ ವೇ. ಮೂ. ಯು. ವಾಸುದೇವಾಚಾರ್ಯರಿಗೆ ನನ್ನ ಧನ್ಯವಾದಗಳು."

10. **ದಾಸರಪದಸಂಗ್ರಹವು** : ಮೂರು ಭಾಗಗಳಲ್ಲಿ 1926ರಿಂದ 1943ವರೆಗೆ ಪ್ರಕಟವಾದವು. ಕೃತಿಗಳ ಸಂಖ್ಯೆ 314, ಪುಟಗಳ ಸಂಖ್ಯೆ 562.

    ದಾಸರಪದಸಂಗ್ರಹವು, ಭಾಗ–1 1926ರಲ್ಲಿ ಪ್ರಕಾಶನಗೊಂಡಿತು. ಇದರಲ್ಲಿ ಶ್ರೀದವಿಠಲ, ಶ್ರೀಶವಿಠಲ, ಪ್ರಸನ್ನವೇಂಕಟ, ಮೋಹನವಿಠಲ, ವ್ಯಾಸವಿಠಲ

ಇವೇ ಮೊದಲಾದ ಅಂಕಿತಗಳುಳ್ಳ 199 ಕೀರ್ತನೆಗಳು 112 ಪುಟಗಳಲ್ಲಿ ಮುದ್ರಿತವಾಗಿದೆ. ಇವುಗಳ ಸಂಪಾದನೆಯಲ್ಲಿ ಶಿವಮೊಗ್ಗದ ಹಂಡೆ ಶ್ರೀಪಾದದಾಸರ ಸಹಾಯ ಪಡೆದಿದ್ದು, ಅವರೇ ಉಪೋದ್ಘಾತವನ್ನೂ ಬರೆದಿದ್ದಾರೆ.

ದಾಸರಪದಸಂಗ್ರಹವು, 2ನೇ ಭಾಗವು ಶ್ರೀ ಪಾವಂಜೆ ಗುರುರಾಯರಿಂದ 1927ರಲ್ಲಿ ಪ್ರಕಾಶನಗೊಂಡಿತು. ಇದರಲ್ಲಿ ಗೋವಿಂದವಿಠಲ, ಕಮಲಾಪತಿ ವಿಠಲ, ವಾಸುದೇವವಿಠಲ, ಪ್ರಾಣೇಶವಿಠಲ, ಶ್ಯಾಮಸುಂದರವಿಠಲ, ವೆಂಕಟವಿಠಲ, ವೇಣುಗೋಪಾಲವಿಠಲ ಇವೇ ಮೊದಲಾದ ಅಂಕಿತಗಳುಳ್ಳ 200 ಕೀರ್ತನೆಗಳು, 118 ಪುಟಗಳಲ್ಲಿ ಮುದ್ರಣಗೊಂಡಿತು.

11. ಉಗಾಭೋಗಗಳು ಎಂಬ ಶೀರ್ಷಿಕೆಯಲ್ಲಿ ಎರಡು ಭಾಗಗಳಲ್ಲಿ ನಾನಾ ಹರಿದಾಸರುಗಳ, ವಿಭಿನ್ನ ಅಂಕಿತಗಳುಳ್ಳ 226 ಉಗಾಭೋಗಗಳನ್ನು ಪ್ರಕಟಿಸಿದರು. 1923ರಲ್ಲಿ ಎರಡನೇಯ ಭಾಗವು ಪ್ರಥಮ ಮುದ್ರಣ ಕಂಡಿತು.

ಇದಲ್ಲದೆ ಮೋಹನದಾಸರ ಕೋಲು ಹಾಡು, ಶ್ರೀಜನ್ನಾಥದಾಸರ ಹರಿಕಥಾಮೃತಸಾರವು (ಈ ಗ್ರಂಥವು ಅತ್ಯಂತ ಜನಪ್ರಿಯವಾಗಿದ್ದು 1925ರಲ್ಲಿ 3ರನೇ ಆವೃತ್ತಿ ಕಂಡ 200 ಪುಟಗಳಿಗೂ ಮೀರಿದ ಗ್ರಂಥ), ಶ್ರೀವಾದಿರಾಜರ ಭ್ರಮರಗೀತೆ, ವೈಕುಂಠವರ್ಣನೆ, ಗುಂಡಕ್ರಿಯೆ, ಸ್ವಪ್ನಪದ, ಲಕ್ಷ್ಮೀಶೋಭಾನೆ, ಕನಕದಾಸರ ಹರಿಭಕ್ತಿಸಾರಗಳೂ ಪ್ರಕಟವಾಗಿವೆ. 1932ರಲ್ಲಿ ಗೋಕಾವಿ ಅನಂತಾಚಾರ್ಯರೆಂಬ ಭಕ್ತರ ಸುಮಾರು 100 ಪುಟಗಳುಳ್ಳ 'ವೆಂಕಟೇಶಪಾರಿಜಾತ' ಎಂಬ ಪದ್ಯಾತ್ಮಕವಾದ ಗ್ರಂಥವನ್ನೂ ಪ್ರಕಟಿಸಿದರು. 1925ರಲ್ಲಿ 114 ಪುಟಗಳುಳ್ಳ 'ಶ್ರೀಕೃಷ್ಣಪಾರಿಜಾತವು' ಎಂಬ ಪದ್ಯಾತ್ಮಕ ಗ್ರಂಥವನ್ನು ಪ್ರಕಟಿಸಿದರು. ಈ ಗ್ರಂಥಕರ್ತೃಗಳು ಗ್ರಂಥದ ಕೊನೆಯಲ್ಲಿ ತಮ್ಮನ್ನು 'ರಾಯಚೂರಸೀಮೆಯ ವರದಪರಾಲ ತಮ್ಮಣ್ಣ' ಎಂದು ಪರಿಚಯಿಸಿ–ಕೊಂಡಿದ್ದಾರೆ.

ಇದಲ್ಲದೆ ಇತರ ದಾಸರ ಪದಗಳು, ಮನೋರಂಜನ ಪದಗಳು, ತುಳಸೀ ಸಂಕೀರ್ತನೆ ಹೀಗೆ ಹಲವು ರೀತಿಯ ಕೃತಿಗಳನ್ನು ಹರಿದಾಸ ಸಾಹಿತ್ಯ

ವಿಭಾಗದಲ್ಲಿ ಪ್ರಕಟಿಸಿ ಶ್ರೀ ಗುರುರಾಯರು ನಾಡಿನ ಜನತೆಗೆ ಮಹದುಪಕಾರವನ್ನು ಮಾಡಿದ್ದಾರೆ.

ಶ್ರೀ ಪಾವಂಜೆ ಗುರುರಾಯರು ತಾವು ಪ್ರಕಟಿಸಿದ ಈ ಗ್ರಂಥಗಳಲ್ಲಿ ಕೆಲವಕ್ಕೆ ಹರಿದಾಸರ ಜೀವನ ಹಾಗು ಸಾಧನೆಗಳ ಪರಿಚಯಾತ್ಮಕ ಲೇಖನಗಳನ್ನು ಬರೆಸಿ ಪ್ರಕಟಿಸಿದ್ದಾರೆ. ಉದಾಹರಣೆಗೆ 1925ರಲ್ಲಿ ಪ್ರಕಾಶಿತವಾದ ಹಂಡೆ ಶ್ರೀಪಾದದಾಸರ "ಪುರಂದರದಾಸರ ಚರಿತ್ರೆ" ಎಂಬ ಕಿರು ಹೊತ್ತಿಗೆ. ಇದನ್ನು ಇತ್ತೀಚೆಗೆ 2001ರಲ್ಲಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದಲೆ ಮರುಮುದ್ರಣಗೊಂಡ ಪುರಂದರದಾಸರ ಕೀರ್ತನೆಗಳ ಸಂಯುಕ್ತ ಸಂಪುಟದಲ್ಲಿ ಸೇರಿಸಲಾಗಿದೆ. ಇದರಂತೆ 'ಶ್ರೀವಾದಿರಾಜಗುರುವರಚರಿತ್ರೆ' ಎಂಬ ಗ್ರಂಥವನ್ನು ಸಾಹಿತ್ಯ ಶಿರೋಮಣಿ ಶ್ರೀ ಬಿ. ಶ್ರೀನಿವಾಸಭಟ್ಟ ಇವರಿಂದ ಬರೆಸಿ 1924ರಲ್ಲಿ ಪ್ರಕಟಿಸಿದ್ದಾರೆ. ಹಾಗೂ ಶ್ರೀಮನ್ಮಧ್ವಾಚಾರ್ಯರವರ ಸಂಕ್ಷಿಪ್ತ ಚರಿತ್ರೆ, ಶ್ರೀಮಜ್ಜಗನ್ನಾಥದಾಸರಾಯರ ಚರಿತ್ರೆ ಇತ್ಯಾದಿ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ. ಇದಲ್ಲದೆ ಇನ್ನೂ ಕೆಲವು ದಾಸರ ಬಗೆಗಿನ ಲೇಖನಗಳನ್ನು ಶ್ರೀ ಪಾವಂಜೆ ಗುರುರಾಯರು ತಾವೇ ಸ್ವತಃ ಬರೆದು ಪ್ರಕಟಿಸಿದ್ದಾರೆ. ಇವುಗಳಿಂದ ಪಾವಂಜೆ ಗುರುರಾಯರ ಗದ್ಯಶೈಲಿ, ಅವರ ಜೀವನ ಶ್ರದ್ಧೆ, ನಂಬಿಕೆಗಳು, ಈ ಕೃತಿಗಳ ಪ್ರಚಾರದ ಹಿಂದೆ ಅವರಿಗಿದ್ದ ಕಳಕಳಿ ಇವೆಲ್ಲವೂ ಸೂಕ್ಷ್ಮವಾಗಿ ತಿಳಿದು ಬರುತ್ತದೆ.

ಉಡುಪಿಯು ಶ್ರೀಕೃಷ್ಣನ ಪ್ರಸಿದ್ಧ ಕ್ಷೇತ್ರವಾದುದರಿಂದಲೂ, ದಾಸರ ಕೀರ್ತನೆಗಳನ್ನು ಬಯಸುವ ಮತ್ತು ಬಳಸುವ ಭಕ್ತರು ಇಲ್ಲಿಗೆ ಬಹುಸಂಖ್ಯೆಯಲ್ಲಿ ಬರುತ್ತಿದ್ದುದರಿಂದಲೂ ಈ ಪುಸ್ತಕಗಳು ಬೇಗನೆ ಜನಪ್ರಿಯವಾದುವು. ಅಲ್ಲದೆ ಈ ಪುಸ್ತಕಗಳು ಸಾಕಷ್ಟು ಶುದ್ಧವಾದ ಮತ್ತು ಸರಳ ಸುಂದರವಾದ ಮುದ್ರಣದಿಂದ ಆ ಕಾಲದಲ್ಲಿ ಪ್ರಸಿದ್ಧವಾಗಿದ್ದುದರಿಂದ ಇವು ಬಹಳ ಬಾರಿ ಪುನರ್ಮುದ್ರಿತವಾಗಬೇಕಾಯಿತು. ಕೆಲವು ಸಂಪುಟಗಳು ಇಪ್ಪತ್ತಕ್ಕೂ ಹೆಚ್ಚು ಬಾರಿ ಪುನರ್ಮುದ್ರಣಗೊಂಡಿದ್ದೇ ಈ ಪುಸ್ತಕಗಳ ಜನಪ್ರಿಯತೆಗೆ ಸಾಕ್ಷಿಯಾಗಿದೆ. ದಕ್ಷಿಣ ಕನ್ನಡದೊಳಗೆ ಮಾತ್ರವಲ್ಲದೆ ಅಖಿಲ ಕರ್ನಾಟಕದಲ್ಲಿ ಈ ಪುಸ್ತಕಗಳಿಗೆ ಮಾನ್ಯತೆಯೂ, ಬೇಡಿಕೆಯೂ ಇದ್ದಿತು.

ಇತ್ತೀಚೆಗೆ 2001 ರಲ್ಲಿ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದಲೆ

ಪುರಂದರದಾಸರ ಕೀರ್ತನೆಗಳ ಸಂಯುಕ್ತಸಂಪುಟದ ಮರುಮುದ್ರಣವಾಯಿತು. ಅದರ ಪ್ರಸ್ತಾವನೆಯಲ್ಲಿ ಡಾ॥ ಪಾದೆಕಲ್ಲು ವಿಷ್ಣು ಭಟ್ಟರು ಬರೆಯುತ್ತಾರೆ. "ಉಡುಪಿಯ ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಗೊಂಡ ದಾಸಸಾಹಿತ್ಯ ಕೃತಿಗಳಿಗೆ ಕರ್ನಾಟಕದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಈ ಗ್ರಂಥಾಲಯದ ಸ್ಥಾಪಕರಾದ ದಿ| ಪಾವಂಜೆ ಗುರುರಾಯರು (1869–1948) ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ ಆ ಕಾಲದ ಅತ್ಯಂತ ಸುಂದರವೆನ್ನಬಹುದಾದ ಮುದ್ರಿತಗ್ರಂಥಗಳನ್ನು ಪ್ರಕಾಶಿಸಿದರು. ವಿವಿಧ ದಾಸರಿಗೆ ಸಂಬಂಧಿಸಿದಂತೆ ಪ್ರಕಟಿಸಿದ ಪುಸ್ತಕಗಳಲ್ಲಿ ಪುರಂದರದಾಸರ ಕೃತಿಗಳ ಐದು ಸಂಪುಟಗಳು (ಭಾಗಗಳು) ಸೇರಿವೆ. ಇವುಗಳಲ್ಲಿ ಮೊದಲನೆಯ ಸಂಪುಟವು 1917ರಲ್ಲಿ ಮುದ್ರಿತವಾಯಿತು. ಐದನೆಯ ಸಂಪುಟವು 1932ರಲ್ಲಿ ಪ್ರಕಟಗೊಂಡಿತು.

ಈ ಕೃತಿಗಳು ಅಖಿಲ ಕರ್ನಾಟಕದಲ್ಲಿ ಎಷ್ಟು ಜನಪ್ರಿಯವಾದುವೆಂಬುದಕ್ಕೆ ಅವುಗಳು ಅನೇಕ ಬಾರಿ ಪುನರ್ಮುದ್ರಿತವಾದುದೇ ಸಾಕ್ಷಿಯಾಗಿದೆ[1]. ಈ ಸಂಕಲನಗಳ ಬಗೆಗೆ "ಈ ವರೆಗೆ ಹೊರಗೆ ಬಂದಿರುವ ಸಂಗ್ರಹಗಳಲ್ಲಿ ವ್ಯಾಪಕವಾದುದು" ಎಂಬ ಮನ್ನಣೆಯಿದೆ[2]. ಐದನೆಯ ಸಂಪುಟದ ಕೊನೆಯಲ್ಲಿ 151 ಉಗಾಭೋಗಗಳನ್ನು ಕೊಡಲಾಗಿದೆ. ಈ ಐದು ಸಂಪುಟಗಳಲ್ಲಿ ಸುಳಾದಿಗಳು ಸೇರಿಲ್ಲ."

ತುಳುನಾಡಿನಲ್ಲಿ ಸುಮಂಗಲೆಯರು ಮದುವೆ, ಉಪನಯನಾದಿ ಶುಭಸಮಾರಂಭಗಳಲ್ಲಿ ಕನ್ನಡದ ಹಾಡುಗಳನ್ನು ಹಾಡುವುದು ಸತ್ಸಂಪ್ರದಾಯ. ಇಂದು ಆಧುನಿಕ ಯುಗದಲ್ಲಿ ಇದು ಕ್ರಮೇಣ ಮರೆಯಾಗುತ್ತಿದೆ. ಈ ಹಾಡುಗಳೂ ಕೂಡ ಮೌಕಿಕ ಪರಂಪರೆಯಲ್ಲಿ ಮುಂದುವರೆಯುತ್ತಿತ್ತು. ಶ್ರೀಪಾವಂಜೆ ಗುರುರಾಯರು ಈ ಜಾನಪದ ಶೈಲಿಯ ಹಾಡುಗಬ್ಬಗಳ ಮಹತ್ವವನ್ನು ಮನಗಂಡು ತಮ್ಮ ಬಂಧುಗಳಾದ ಅಗಿದಕಳಿಯ ನಾರ್ಣಪ್ಪಯ್ಯ ಎಂಬುವವರಿಂದ ಸಂಗ್ರಹಿಸಿ "ಕನ್ನಡ ಸ್ತ್ರೀಪದ್ಯಮಾಲಿಕೆ" ಎಂಬ ಹೆಸರಿನಲ್ಲಿ,

---

1 ಮೊದಲ ಭಾಗವು 1963ರ ವರೆಗೆ 20 ಬಾರಿಯೂ, ಎರಡನೆಯ ಭಾಗವು 1961ರ ವರೆಗೆ 14 ಬಾರಿಯೂ, ಮೂರನೆಯ ಭಾಗವು 1969ರ ವರೆಗೆ 16 ಬಾರಿಯೂ, ನಾಲ್ಕನೆಯ ಭಾಗವು 1959ರ ವರೆಗೆ 7 ಬಾರಿಯೂ, ಐದನೆಯ ಭಾಗವು 1939ರ ಅವಧಿಯಲ್ಲೇ 2 ಬಾರಿಯೂ ಮುದ್ರಿತವಾಗಿದ್ದುದು ತಿಳಿದುಬರುತ್ತದೆ. ಅನಂತರವೂ ಇವು ಹಲವು ಮುದ್ರಣಗಳನ್ನು ಕಂಡಿವೆ.

2 ಎಸ್.ಕೆ. ರಾಮಚಂದ್ರ ರಾವ್, 'ಪುರಂದರ ಸಾಹಿತ್ಯದರ್ಶನ' ಪ್ರಸ್ತಾವನೆ, ಪು.50

1928ರಲ್ಲಿ ಪ್ರಥಮಾವೃತ್ತಿ ಛಾಪಿಸಿ ಪ್ರಕಟಿಸಿದರು. ಈ ಗ್ರಂಥಕ್ಕೂ ಒಳ್ಳೆಯ ಬೇಡಿಕೆ ಇದ್ದುದ್ದರಿಂದ 1933ರಲ್ಲಿ ಇದು ತೃತೀಯ ಮುದ್ರಣ ಕಂಡಿತು. ಶುಭಸಮಾರಂಭಗಳಲ್ಲಿ ಭಗವಂತನ ಸ್ಮರಣೆ ತಂದುಕೊಡಲು ಈ ಪದ್ಯಗಳು ಉಪಯುಕ್ತವಾಗಿವೆ. ಇದು ಪ್ರಾಯಃ ಹರಿದಾಸ ಸಾಹಿತ್ಯವೆನಿಸಲಾರದು. ಇದು ಜಾನಪದ ಸಾಹಿತ್ಯಕ್ಕೆ ಸೇರುತ್ತದೆ.

ಶ್ರೀ ಪಾವಂಜೆ ಗುರುರಾಯರು 1916ರಲ್ಲಿ ಪ್ರಕಟಿಸಿದ ಇನ್ನೊಂದು ಅಪೂರ್ವ ಗ್ರಂಥ ಶ್ರೀಯುತ ಎಂ.ಆರ್. ಸುಬ್ರಹ್ಮಣ್ಯ ಶಾಸ್ತ್ರಗಳ "ತುಳು ಕನ್ಯೋಪದೇಶ". ಸಂಸ್ಕೃತದ ನೀತಿ–ಶತಕಗಳ ಮಾದರಿಯಲ್ಲಿ, ಸಂಸ್ಕೃತ ವೃತ್ತದ ಶ್ಲೋಕಗಳ ರೂಪದಲ್ಲಿ ಮದುಮಗಳ ಉಪದೇಶಕ್ಕಾಗಿ ರಚಿಸಿದ 88 ಪದ್ಯಗಳುಳ್ಳ ಪುಟ್ಟ ತುಳು ಕೃತಿ. ಈ ಗ್ರಂಥವೂ ತುಂಬಾ ಜನಪ್ರಿಯವಾಗಿದ್ದು ಆಗಿನ ಕಾಲದಲ್ಲಿ ಮೂರು ಮರುಮುದ್ರಣಗಳನ್ನು ಕಂಡಿತು. 1990ರಲ್ಲಿ ಈ ಪುಸ್ತಕವು "ಗೋವಿಂದ ಪೈ ಸಂಶೋಧನ ಕೇಂದ್ರ" ಉಡುಪಿ ಇವರಿಂದ ನಾಲ್ಕನೇಯ ಬಾರಿ ಪುನರ್ಮುದ್ರಣಗೊಂಡಿತು.

ಶ್ರೀ ಪಾವಂಜೆ ಗುರುರಾಯರು ಪ್ರಮುಖವಾಗಿ ಧರ್ಮಿಕ ಗ್ರಂಥಗಳನ್ನೇ ಪ್ರಕಾಶಿಸುತ್ತಿದ್ದರೂ. ಅವರ ಪ್ರಕಾಶನದಿಂದ ಹೊರಬಂದ ಪುಸ್ತಕಗಳ ವೈವಿಧ್ಯತೆಯನ್ನು ಕಂಡರೆ ನಿಬ್ಬೆರಗಾಗುತ್ತೇವೆ. ಉದಾಹರಣೆಗೆ ಅವರು 1933ರಲ್ಲಿ ಪ್ರಕಟಿಸಿದ "ಕ್ಷೌರನಿರ್ಣಯಸಂಗ್ರಹ" ಎಂಬ ಸಣ್ಣ ಹೊತ್ತಿಗೆ. ಇದರಲ್ಲಿ ಕ್ಷೌರಮಾಡಿಕೊಳ್ಳಲು ವಿಹಿತವಾದ ತಿಥಿ, ವಾರ, ನಕ್ಷತ್ರಾದಿಗಳ ಬಗೆಗೆ ನಿರ್ಣಯವಿದೆ.

ಶ್ರೀ ಪಾವಂಜೆಯವರ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದ ಹೊರಬಂದ ಇನ್ನೊಂದು ಜನಪ್ರಿಯ ಗ್ರಂಥವೆಂದರೆ "ಉಡುಪಿಕ್ಷೇತ್ರಮಹಿಮಾ" ಎನ್ನುವ ಉಪಯುಕ್ತ ಗ್ರಂಥ. ಇದರ ಲೇಖಕರು ಶ್ರೀಯುತ ಬಿ. ಶ್ರೀನಿವಾಸ ಭಟ್ಟ, ಸಾಹಿತ್ಯ ಶಿರೋಮಣಿ ಎನ್ನುವವರು. ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದ ಮತ್ತು ಶ್ರೀಕೃಷ್ಣಮುದ್ರಣಾಲಯದ ಮಾಲೀಕರಾದ ಶ್ರೀಪಾವಂಜೆ ಗುರುರಾಯರ ಸೂಚನೆಯಂತೆ ಈ ಗ್ರಂಥವನ್ನು ರಚಿಸಿರುವುದಾಗಿ ಗ್ರಂಥಕರ್ತೃಗಳೇ ಈ ಗ್ರಂಥದ ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಹೆಸರಾಂತ ತೀರ್ಥಕ್ಷೇತ್ರವಾದ ಉಡುಪಿಯ

ಮಾಹತ್ಮೆಯ ಬಗೆಗಿನ ಅತಿ ಪ್ರಾಚೀನ ಬರಹಗಳಲ್ಲಿ ಇದೊಂದಾಗಿದೆ ಎನ್ನುವುದು ಈ ಪುಸ್ತಕದ ಹೆಗ್ಗಳಿಕೆ. 1932ರಲ್ಲಿ ತೃತೀಯಮುದ್ರಣ ಕಂಡಿರುವುದು ಈ ಪುಸ್ತಕದ ಜನಪ್ರಿಯತೆಗೆ ದ್ಯೋತಕ. ಈ ಜನಪ್ರಿಯ ಮತ್ತು ಉಪಯುಕ್ತ ಪುಸ್ತಕವು ಸುಮಾರು ಒಂದು ಶತಮಾನದಿಂದ ಮರುಮುದ್ರಣದ ಬೆಳಕು ಕಾಣದಿರುವುದು ದುರ್ದೈವದ ಸಂಗತಿ.

ಶ್ರೀ ಬಿಳಿಯಾರು ಶ್ರೀನಿವಾಸ ಭಟ್ಟರು ಅಲಂಕಾರಶಾಸ್ತ್ರದ ಪ್ರಸಿದ್ಧ ವಿದ್ವಾಂಸರು. ಉಡುಪಿಯ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಾಹಿತ್ಯಾಧ್ಯಾಪಕರಾಗಿ ದೀರ್ಘಕಾಲ ಸೇವೆ ಸಲ್ಲಿಸಿದ್ದಾರೆ. ಶ್ರೀ ಪಾವಂಜೆ ಗುರುರಾಯರಿಗಾಗಿ ಇವರು "ಉಡುಪಿಕ್ಷೇತ್ರಮಹಿಮಾ" ಎನ್ನುವ ಗ್ರಂಥವಲ್ಲದೆ "ಶ್ರೀವಾದಿರಾಜಗುರುವರಚರಿತ್ರೆ", "ಋಗ್ವೇದೀಯಾ ಆಹ್ನಿಕಮಂಜರೀ", "ಯಜುರ್ವೇದೀಯಾ ಆಹ್ನಿಕಮಂಜರೀ" ಮೊದಲಾದ ಗ್ರಂಥಗಳನ್ನು ರಚಿಸಿ ಕೊಟ್ಟಿದ್ದಾರೆ. ಇವರು ಮಾಡಿರುವ ಕೆಲವು ಸಂಸ್ಕೃತ ಗ್ರಂಥಗಳ ಕನ್ನಡಾನುವಾದಗಳೂ ಕೂಡ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದ ಪ್ರಕಾಶನಗೊಂಡಿದೆ.

### ಪಾವಂಜೆಗುರುರಾಯರಿಂದ ಪ್ರಕಟಿತ ಸ್ತೋತ್ರ, ಮಂತ್ರ, ಆಚಾರ ಪುಸ್ತಕಗಳು

ನಿತ್ಯಾನುಷ್ಠಾನ ಮಂತ್ರಪುಸ್ತಕಗಳ ಪ್ರಕಟನೆಯ ಕ್ಷೇತ್ರದಲ್ಲಿಯೂ ಸಹ ಶ್ರೀಪಾವಂಜೆ ಗುರುರಾಯರು ತಮ್ಮದೇ ಆದ ಸಾಧನೆಯ ಹೊಸ ಮೈಲಿಗಲ್ಲನ್ನು ಸ್ಥಾಪಿಸಿದರು. ಅವುಗಳಲ್ಲಿ –

1. ವಿಷ್ಣುಸಹಸ್ರನಾಮಸ್ತೋತ್ರ
2. ಕೃಷ್ಣಾಷ್ಟೋತ್ತರಶತನಾಮಸ್ತೋತ್ರ
3. ಋಗ್ವೇದೀಯಂ ತ್ರೈಕಾಲಿಕಸಂಧ್ಯಾವಂದನಂ
4. ಯಜುರ್ವೇದೀಯಂ ತ್ರೈಕಾಲಿಕಸಂಧ್ಯಾವಂದನಂ
5. ದೇವಪೂಜಾಪದ್ಧತಿ
6. ಪವಮಾನಪಂಚಸೂಕ್ತಂ ಹೋಮವಿಧಿಸಹಿತಂ
7. ಅಭಿಷೇಕಸೂಕ್ತಾನಿ
9. ಋಗ್ವೇದೀಯಾ ಆಹ್ನಿಕಮಂಜರೀ
10. ದುರ್ಗಾ ಸಪ್ತಶತೀ

11. ಋಗ್ವೇದೀಯ ನವಗ್ರಹಪೂಜಾವಿಧಿಃ
12. ಸ್ತೋತ್ರಮಂಜರೀ
13. ಸುಮಧ್ವವಿಜಯ
14. ಯಜುರ್ವೇದೀಯ ಬೋಧಾಯನ–ಶ್ರಾದ್ಧಪ್ರಯೋಗಃ

ಇತ್ಯಾದಿ ಅನೇಕ ಗ್ರಂಥಗಳು ಪ್ರಸಿದ್ಧವಾಗಿವೆ.

ಇವುಗಳಲ್ಲಿ ಋಗ್ವೇದೀಯಂ ತ್ರೈಕಾಲಿಕಸಂಧ್ಯಾವಂದನಂ 1991ರಲ್ಲಿ ಇಪ್ಪತ್ತಮೂರನೆ ಮರುಮುದ್ರಣವನ್ನು ಕಂಡಿತು. ದೇವಪೂಜಾಪದ್ಧತಿಯೂ ಕೂಡ 1991ರಲ್ಲಿ ಇಪ್ಪತ್ತಾರನೆ ಮರುಮುದ್ರಣವನ್ನು ಕಂಡಿತು. ಇವೆರಡೂ ತುಂಬ ಉಪಯುಕ್ತ ಮತ್ತು ಜನಪ್ರಿಯ ಗ್ರಂಥಗಳು. ಈ ಎರಡು ಗ್ರಂಥಗಳು ಪ್ರಕಟವಾಗುವ ಮುನ್ನ ನಿತ್ಯಾನುಷ್ಠಾನ ಕರ್ಮಗಳಾದ ಸಂಧ್ಯಾವಂದನೆ ಹಾಗು ದೇವಪೂಜೆಯಲ್ಲಿ ಬಳಕೆಯಾಗುವ ಮಂತ್ರಗಳಲ್ಲಿ ಏಕರೂಪತೆ ಇರಲಿಲ್ಲ. ಒಬೊಬ್ಬರು ತಮಗೆ ತೋಚಿದ ಮಂತ್ರಗಳನ್ನು ಸಂಧ್ಯಾವಂದನೆ ಮಾತ್ತು ದೇವಪೂಜೆಯಲ್ಲಿ ಬಳಸುತ್ತಿದ್ದರು. ಈ ಗ್ರಂಥಗಳು ಪ್ರಕಾಶನವಾದ ನಂತರ ಈ ಮಂತ್ರಗಳಲ್ಲಿ ಏಕರೂಪತೆ (Standardisation) ಕಂಡು ಬಂತು. ಇಂದು ಎಲ್ಲಾ ಮಾಧ್ವ ವಟುಗಳು ಸಂಧ್ಯಾವಂದನೆಯಲ್ಲಿ ಮತ್ತು ದೇವಪೂಜೆಯಲ್ಲಿ ಸಮಾನ ಮಂತ್ರಗಳನ್ನು ಉಪಯೋಗಿಸುತ್ತಾರೆ. ಇದಕ್ಕೆಲ್ಲಾ ಕಾರಣೀಭೂತರು ಶ್ರೀ ಪಾವಂಜೆ ಗುರುರಾಯರು. ಇದು ಅವರ ಅತಿದೊಡ್ಡ ಸಾಧನೆಗಳಲ್ಲಿ ಗಣನೆಗೆ ತೆಗೆದುಕೊಳ್ಳಬೇಕಾದ ಅಂಶ. ಅಂದಿನ ಉಡುಪಿಯ ಹೆಸರಾಂತ ಸಂಸ್ಕೃತ ಪಂಡಿತರಾದ ಶ್ರೀಯುತ ಕಟ್ಟೆ ಶ್ರೀನಿವಾಸಾಚಾರ್ಯರು ಗುರುರಾಯರ ಈ ಸಾಧನೆಯನ್ನು ಮುಕ್ತಕಂಠದಿಂದ ಹೊಗಳುತ್ತಿದ್ದರಂತೆ. (ಕಟ್ಟೆ ಶ್ರೀನಿವಾಸಾಚಾರ್ಯರ ಮಕ್ಕಳೇ ಕರ್ನಾಟಕ ರಾಜ್ಯದ ಸುಪ್ರಸಿದ್ಧ ಮಂತ್ರಿಗಳಾಗಿದ್ದ ಡಾ॥ ವಿ.ಎಸ್. ಆಚಾರ್ಯರು.)

"ದೇವಪೂಜಾಪದ್ಧತಿಃ"ಯ ರಚನೆಯ ಬಗೆಗೆ ಶ್ರೀ ಪಾವಂಜೆ ಗುರುರಾಯರು ಉಪೋದ್ಘಾತದಲ್ಲಿ ಹೀಗೆ ಬರೆಯುತ್ತಾರೆ – "ದೇವಾರ್ಚನದ ವಿಧಿಯನ್ನು ತಿಳಿಸುವ ಗ್ರಂಥಗಳು ಅನೇಕವಿದ್ದರೂ ಅವುಗಳಲ್ಲಿ ಕೆಲವು ಬಹು ವಿಸ್ತಾರವಾಗಿರುವುದರಿಂದಲೂ ಕೆಲವು ಇಲ್ಲಿಯ ಸಂಪ್ರದಾಯಗಳಿಗೆ

ವ್ಯತ್ಯಸ್ತವಾಗಿರುವುದರಿಂದಲೂ ಕರ್ಮಗಳು ಲೋಪವಾಗುತ್ತಾ ಬರುತ್ತಿರುವುದನ್ನು ಕಂಡು, ಲೋಕಾನುಗ್ರಹವನ್ನೇ ಉದ್ದೇಶ ಮಾಡಿಕೊಂಡು ಸರ್ವದಾ ನಮ್ಮ ಬಾಲಕರ ಶ್ರೇಯೋऽಭಿವೃದ್ಧಿಯನ್ನೇ ಚಿಂತಿಸಿರುವ, ಈ ಪುಣ್ಯಕ್ಷೇತ್ರದಲ್ಲಿ "ಶ್ರೀಮನ್ಮಧ್ವಸಿದ್ಧಾಂತ ಸಂವರ್ಧಿನೀ" ಮತ್ತು "ಶ್ರೀಮಧ್ವಸಿದ್ಧಾಂತಪ್ರಬೋಧಿನೀ" ಎಂಬ ಎರಡು ದಿವ್ಯ ಸಂಸ್ಥೆಗಳ ಮುಖ್ಯಸ್ಥಾಪಕರಾಗಿದ್ದ ಶ್ರೀಮತ್ಪರಮಹಂಸಪರಿ–ವ್ರಾಜಕಾಚಾರ್ಯತ್ವಾದ್ಯನೇಕಗುಣಸಂಪನ್ನರಾದ ಕೀ॥ ಶೇ॥ ಶ್ರೀಅದಮಾರುಮಠದ ಶ್ರೀಮದ್ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು ದೇವಪೂಜಾವಿಧಿಯ ಒಂದು ಚಿಕ್ಕ ಪುಸ್ತಕವನ್ನು ರಚಿಸಬೇಕಾಗಿ ಕಳೆದ ಕೀಲಕ ಸಂವತ್ಸರದ ಫಾಲ್ಗುಣ ಬ.14ನೆಯ ದಿವಸ ವಿದ್ಯಾಶಾಲೆಯಲ್ಲಿ ನೆರೆದ ಸಭೆಯಲ್ಲಿ ಅಪ್ಪಣೆ ಕೊಡಿಸಿದ ಪ್ರಕಾರ ಈ ಚಿಕ್ಕ ಪುಸ್ತಕವನ್ನು ಛಾಪಿಸಿ ಪ್ರಕಟಿಸಿದೆ. ತಂತ್ರಸಾರ, ಪದ್ಯಮಾಲಿಕೆ, ಶಿಷ್ಟಾಚಾರ ಸಂಪ್ರದಾಯಗಳಿಗೆ ಅನುಸಾರವಾಗಿ ಇದನ್ನು ರಚಿಸಿದೆ."

ಆಹ್ನಿಕಮಂಜರಿಯು ಮುಂಜಾನೆಯಿಂದ ಸಂಜೆಯ ತನಕ ನಿತ್ಯಾನುಷ್ಠಾನಗಳಲ್ಲಿ ಬಳಸುವ ಮಂತ್ರಗಳ, ಸ್ತೋತ್ರಗಳ ಮತ್ತು ಸೂಕ್ತಗಳ ಸಂಕಲನ. "ಅಹರಹಃ ಸಂಧ್ಯಾಮುಪಾಸೀತ" ಇತ್ಯಾದಿ ವಿಧಿಗಳು ನಿತ್ಯಕರ್ಮಾನುಷ್ಠಾನಗಳ ಬಗ್ಗೆ ಹೆಚ್ಚಿನ ಒತ್ತು ನೀಡಿವೆ. ಉಷಃಕಾಲದಲ್ಲಿ ಎದ್ದು ರಾತ್ರಿ ಮಲಗುವವರೆಗೆ ಬ್ರಾಹ್ಮಣನು ಮಾಡಬೇಕಾದ ಧಾರ್ಮಿಕ ಕರ್ಮಗಳೆಲ್ಲವನ್ನೂ ಒಂದೆಡೆಯಲ್ಲಿ ಸಂಗ್ರಹಿಸಿ ಪ್ರಕಟಿಸುವ ಯೋಜನೆಯನ್ನು ಶ್ರೀಮನ್ಮಧ್ವಸಿದ್ಧಾಂತ–ಗ್ರಂಥಾಲಯದ ಸ್ಥಾಪಕರಾದ ಶ್ರೀಪಾವಂಜೆ ಗುರುರಾಯರು ಕೈಗೊಂಡರು. ಆ ಕಾಲದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರಾದ ಸಾಹಿತ್ಯ ಶಿರೋಮಣಿ ಶ್ರೀ ಬಿ. ಶ್ರೀನಿವಾಸ ಭಟ್ಟರು ಗುರುರಾಯರ ವಿನಂತಿಯ ಮೇರೆಗೆ "ಆಹ್ನಿಕಮಂಜರೀ" ಎಂಬ ಸಂಕಲನ ಗ್ರಂಥವನ್ನು ಋಗ್ವೇದಿಗಳಿಗೆ ಮತ್ತು ಯಜುರ್ವೇದಿಗಳಿಗೆ ಪ್ರತ್ಯೇಕವಾಗಿ ಅನುಕೂಲವಾಗುವಂತೆ ಸಂಪಾದಿಸಿ ಗುರುರಾಯರ ಸದಿಚ್ಛೆಯನ್ನು ಸಾಕಾರಗೊಳಿಸಿದರು. ಈ ಸಂಗ್ರಹಗ್ರಂಥದಲ್ಲಿ ನಿತ್ಯವಿಧಿಗಳೊಂದಿಗೆ ರಥಸಪ್ತಮೀ, ಭೀಷ್ಮಾಷ್ಟಮೀ, ಸ್ನಾನಾರ್ಘ್ಯಮಂತ್ರ ಮೊದಲಾದ ನೈಮಿತ್ತಿಕ ವಿಷಯಗಳನ್ನೂ, ವಿಷ್ಣುಸಹಸ್ರನಾಮಸ್ತೋತ್ರ ಮೊದಲಾದ ಹಲವು ಮುಖ್ಯ ಸ್ತೋತ್ರಗಳನ್ನೂ ಹಾಗೂ ಪುರುಷಸೂಕ್ತ, ಶ್ರೀಸೂಕ್ತ ಮೊದಲಾದ ನಾನಾ ವೈದಿಕಸೂಕ್ತಗಳನ್ನೂ ಸೇರಿಸುವ ಮೂಲಕ ಹೆಚ್ಚೆಚ್ಚು ಜನಪ್ರಿಯವಾಗುವಂತೆ ಸಿದ್ಧಪಡಿಸಲಾಯಿತು. ಇದರಿಂದ

ಈ ಗ್ರಂಥವು ಭಾರತದಾದ್ಯಂತ ಪ್ರಸಿದ್ಧಿಯನ್ನು ಪಡೆಯಿತು. ಋಗ್ವೇದೀಯ ಆಹ್ನಿಕಮಂಜರಿಯು ಈ ವರೆಗೆ ಒಂಬತ್ತು ಮರುಮುದ್ರಣ ಕಂಡಿರುವುದು ಇದರ ಪ್ರಸಿದ್ಧಿಗೆ ದ್ಯೋತಕವಾಗಿದೆ. ಈ ಗ್ರಂಥದ ಅನುಕರಣೆ ಮಾಡಿ ಅನೇಕ ಇತರ ಗ್ರಂಥಗಳು ಸಹ ಮೂಡಿ ಬಂದಿವೆ.

### ಶ್ರೀ ಪಾವಂಜೆ ಗುರುರಾಯರಿಂದ ಪ್ರಕಾಶಿತ ಕನ್ನಡಾನುವಾದಿತ ಸಂಸ್ಕೃತ ಗ್ರಂಥಗಳು :

ಸಂಸ್ಕೃತ ಗ್ರಂಥಗಳ ಕನ್ನಡಾನುವಾದದ ಪ್ರಕಾಶನ ಇನ್ನೊಂದು ಪ್ರಕಾರ. ಇದಕ್ಕೂ ಶ್ರೀ ಪಾವಂಜೆ ಗುರುರಾಯರು ಕೈ ಹಾಕಿ ಸೈ ಎನಿಸಿಕೊಂಡರು. ಇವುಗಳಲ್ಲಿ ಸರ್ವಪಾಪಗಳನ್ನು ಪರಿಹರಿಸಿ, ಸರ್ವಮಂಗಳವನ್ನೂ ಅದರಲ್ಲೂ ವಿಶೇಷವಾಗಿ ವಿವಾಹೋತ್ಸವವನ್ನು ಸಂಪಾದಿಸಿಕೊಡುವ ಶ್ರೀನಿವಾಸನ ಪದ್ಮಾವತಿಯೊಂದಿಗೆ ನಡೆದ ಕಲ್ಯಾಣಪ್ರಕರಣವನ್ನು ವಿವರವಾಗಿ ಬಣ್ಣಿಸುವ ಭವಿಷ್ಯೋತ್ತರಪುರಾಣಾಂತರ್ಗತ ಶ್ರೀವೇಂಕಟೇಶ–ಮಾಹಾತ್ಮ್ಯಮ್, ಮನುಸ್ಮೃತಿ, ವಾಯುಸ್ತುತಿ ಇತ್ಯಾದಿ ಗ್ರಂಥಗಳ ಕನ್ನಡಾನುವಾದ ಪ್ರಸಿದ್ಧವಾಗಿವೆ. ಶ್ರೀ ಗುರುರಾಯರು ಅಂದಿನ ಉಡುಪಿಯ ಸಂಸ್ಕೃತ ಕಾಲೇಜಿನ ಉಪಾಧ್ಯಾಯರೊಬ್ಬರಿಂದ ಮನುಸ್ಮೃತಿಯ ಕನ್ನಡಭಾವಾನುವಾದ ಮಾಡಿಸಿ ಪ್ರಕಟಿಸಿದ್ದರು. ಈ ಅನುವಾದದ ಸರಳತೆ ಮತ್ತು ಸೌಂದರ್ಯವನ್ನು ಕಂಡು ಮನಸೋತು ಅಂದಿನ ಪ್ರಸಿದ್ಧ ಕನ್ನಡ ಕವಿಗಳಾದ ಡಿ.ವಿ.ಜಿ.ಯರವರೂ ಕೂಡ ಮೆಚ್ಚುಗೆಯ ಮಾತನಾಡಿದ್ದರಂತೆ.

### ಶ್ರೀ ಪಾವಂಜೆ ಗುರುರಾಯರಿಂದ ಸಂಶೋಧಿತ, ಸಂಪಾದಿತ, ಪ್ರಕಾಶಿತ ಸಂಸ್ಕೃತ ಗ್ರಂಥಗಳು :

ಶ್ರೀ ಪಾವಂಜೆ ಗುರುರಾಯರು ಗೈದ ಇನ್ನೊಂದು ಅತ್ಯಪೂರ್ವ ಸಾರಸ್ವತ ಸೇವೆಯೆಂದರೆ ಉಡುಪಿಯ ಅಷ್ಟಮಠಗಳಲ್ಲಿ ಕ್ರಿಮಿಭಕ್ಷಣೆಯಿಂದ ನಶಿಸುತ್ತಿದ್ದ ತಾಡವೋಲೆಯಲ್ಲಿದ್ದ ಅಪರೂಪದ ತುಳುಲಿಪಿಬದ್ಧ ಸಂಸ್ಕೃತ ಗ್ರಂಥಗಳ ಸಂಶೋಧನೆ, ಸಂಪಾದನೆ ಮತ್ತು ಪ್ರಕಟನೆ.

ಓಲೆಗರಿಗಳಲ್ಲಿ ಅಡಗಿದ್ದು, ಪಂಡಿತರ ದೇವರ ಮನೆಗಳಲ್ಲಿ, ವಿದ್ವಾಂಸರ–ಗುರುಪೀಠಗಳ ಕಡತಗಳಲ್ಲಿ ಸೇರಿ ಪಾಮರರಿಗೆ ಕೈಗೆಟಕದಂತಿದ್ದ ಸ್ತೋತ್ರಗಳನ್ನೂ, ಭಗವದ್ಭಕ್ತಿಯ ಸಾಧನ–ಅನುಷ್ಠಾನಕ್ಕೆ ಬರಬೇಕಾದಂಥ ಅಪೂರ್ವ ಶಾಸ್ತ್ರಸಾಹಿತ್ಯವನ್ನು ಕತ್ತಲ ಕೋಣೆಯಿಂದ ಹೊರತೆಗೆದು, ಬೆಳಕಿಗೆ ತಂದರು. ಜ್ಞಾನದಾಹದಿಂದ ತೊಳಲುತ್ತಿದ್ದ ಅಸಂಖ್ಯ ಸಜ್ಜೀವರ ಬಾಳಿಗೆ ಬೆಳಕಾಗಿ ಬಂದರು. ಅವರು ಮಾಡಿದ ಈ ಸೇವೆ ಅಲ್ಪವೇನಲ್ಲ.

ಇವುಗಳಲ್ಲಿ ಉಲ್ಲೇಖನೀಯವಾದದ್ದು ಶ್ರೀನಾರಾಯಣಪಂಡಿತಾ–ಚಾರ್ಯರಿಂದ ರಚಿತವಾದ "ಶ್ರೀಸುಮಧ್ವವಿಜಯ ಭಾವಪ್ರಕಾಶಿಕಾ" ಎನ್ನುವ ಗ್ರಂಥ. ತಮ್ಮದೇ ಮೇರು ಕಾವ್ಯವಾದ ಸುಮಧ್ವವಿಜಯದ ವ್ಯಾಖ್ಯಾನವಿದು. ಅತ್ಯಂತ ಉಪಯುಕ್ತವಾದ ಗ್ರಂಥ. ಶ್ರೀಮನ್ಮಧ್ವಾಚಾರ್ಯರ ಜೀವನ ಚರಿತ್ರೆಯ ಬಗ್ಗೆ, ಅವರು ಸಂದರ್ಶಿಸಿದ ಊರುಗಳ ಹೆಸರು ಇತ್ಯಾದಿಗಳ ಬಗ್ಗೆ ವಿಶೇಷ ಬೆಳಕು ಚೆಲ್ಲುವ ಗ್ರಂಥ. ಇದನ್ನು 1925ರಲ್ಲಿ ಪ್ರಥಮ ಬಾರಿ ಸಂಪಾದಿಸಿ, ಮುದ್ರಿಸಿ ಪ್ರಕಟಿಸಿದರು. ಈ ಗ್ರಂಥದ ಪ್ರಾಮುಖ್ಯತೆಯ ಬಗ್ಗೆ ಪ್ರಸಿದ್ಧ ಮಾಧ್ವ ಇತಿಹಾಸಕಾರರಾದ ಡಾ॥ ಬಿ.ಎನ್.ಕೆ. ಶರ್ಮ ಅವರು ತಮ್ಮ 'History of the Dvaita School of Vedanta and its Literature' ಎನ್ನುವ ಮೇರು ಕೃತಿಯಲ್ಲಿ ಬರೆಯುತ್ತಾರೆ – 'This gloss is of immense value for a historical appreciation of those incidents in the life of Madhva, whose scenes have been laid in the Tulu country. It also helps to throw light on the correct name or identity of certain persons also referred to by other epithets or sobriquets (e.g. Cola-ja : Padmatīrtha and Dvīpi purī : Pundarīka purī). With this gloss we can easily reconstruct, fairly accurately, the movements of Madhva, within the Tulu country and outside[3].'

ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವೆಂದರೆ ಕೊನೆಯಲ್ಲಿ ಶ್ರೀನಾರಾಯಣ–ಪಂಡಿತಾಚಾರ್ಯರು ದಾಖಲಿಸಿದ ಈ ಶ್ಲೋಕಗಳು:

---

3. History of the Dvaita School of Vedānta and its Literature, Dr. B.N.K. Sharma, Publisher: Motilal Banarasidass, Third Edition 2000, Page No. 219.

"ಚರ್ಯಾ ದೃಷ್ಟಾ ನರ್ಯೈಃ ಕಾಶ್ಚಿದ್ ವಿಸ್ಮೃತಾ ದೇವಮಾಯಯಾ ।
ಅವಿಸ್ಮೃತಾಶ್ಚ ಪುರುಷೈರ್ನಾಸ್ಮಾಭಿಃ ಸಕಲಾಃ ಶ್ರುತಾಃ ।
ಶುತಾಶ್ಚಕಾಶ್ಚಿನ್ನೈವೋಕ್ತಾ ದೇವಗುಹ್ಯತ್ವನಿಶ್ಚಯಾತ್ ।
ಅನ್ಯಾಸ್ತಥೈವ ನ ಪ್ರೋಕ್ತಾ ಗ್ರಂಥಬಾಹುಲ್ಯಭೀತಿತಃ ।"

ಅನುವಾದ – ಕೆಲವು ಘಟನೆಗಳನ್ನು ಕಂಡವರೂ ಕೂಡ ದೇವಮಾಯೆಯಿಂದಾಗಿ ಮರೆತಿದ್ದಾರೆ. ನೆಪಿಸುವವರಲ್ಲಿಯೂ ಕೂಡ ಎಲ್ಲಾ ಸಂಗತಿಗಳು ನನ್ನ ಕಿವಿಗೆ ಬಿದ್ದಿಲ್ಲ. ಕಿವಿಗೆ ಬಿದ್ದದ್ದರಲ್ಲೂ ಎಲ್ಲವನ್ನು ನಾನು ದಾಖಲಿಸಲಿಲ್ಲ, ದೇವಗುಹ್ಯವೆಂದು ತಿಳಿದು ಕೆಲವನ್ನು ಬೇಕೆಂದೇ ಬಿಟ್ಟಿದ್ದೇನೆ. ಮತ್ತೆ ಕೆಲವನ್ನು ಗ್ರಂಥವಿಸ್ತಾರವಾದೀತೆಂಬ ಭಯದಿಂದ ಕೈಬಿಟ್ಟಿದ್ದೇನೆ.

"ಪ್ರಾಯೇಣ ನೈಕಮಾತ್ರೋಕ್ತಾ ಕಥಿತಾ ಇಹ ಸರ್ವಶಃ ।
ಮಯಾ ದೃಷ್ಟಾ ಧ್ರುವಮಿತಿ ಪ್ರೋಕ್ತಾಃ ಪ್ರಾಯೇಣ ಪೂರುಷೈಃ ।
ದ್ವಯೋರ್ವಕ್ತ್ರೋರ್ವಿರೋಧೇ ತು ಸ್ವೀಕೃತಾ ಪ್ರಬಲಸ್ಯ ಗೀಃ ।"

ಅನುವಾದ – ಒಬ್ಬ ಮಾತ್ರ ಕಂಡುದಾಗಿ ಹೇಳಿದರೆ, ಅದಕ್ಕೆ ಯಾವೆಡೆಯಿಂದಲು ಸಂವಾದ ದೊರಕದಿದ್ದರೆ, ಅಂಥ ಘಟನೆಗಳನ್ನು ಪೂರ್ತಿಯಾಗಿ ಕೈಬಿಟ್ಟಿದ್ದೇನೆ. ನಾವು ನಿಶ್ಚಯವಾಗಿ ನೋಡಿದ್ದೇವೆ ಎಂದು ಹಲವರು ಹೇಳಿದ ಘಟನೆಗಳನ್ನಷ್ಟೆ ಇಲ್ಲಿ ದಾಖಲಿಸಿದ್ದೇನೆ. ಇಬ್ಬರ ವಕ್ತವ್ಯಗಳಲ್ಲಿ ಪರಸ್ಪರ ವಿರೋಧವಿದ್ದಲ್ಲಿ ಪ್ರಬಲರ ಹೇಳಿಕೆಯನ್ನು ಸ್ವೀಕರಿಸಿದ್ದೇನೆ.

ಕಾವ್ಯಶ್ರೀಯೇ ವಾ ಗುರುಕೀರ್ತಯೇ ವಾ
ಪ್ರೋಕ್ತಂ ಸ್ವಯೈವಾಪಿ ಮನೀಷಯಾ ವಾ ।
ತಸ್ಮಾನ್ನ ಶಂಕ್ಯೇತ ಮಹಾಜನೇನ
ಪುಂಸಾ ಕುಶಾಗ್ರೀಯಧಿಯಾಽಪ್ಯವಶ್ಯಮ್ ॥"

ಅನುವಾದ–ಕಾವ್ಯದ ಮೆರಗಿಗಾಗಲಿ,ಗುರುಗಳನ್ನು ಅತಿರಂಜಿಸುವುದಕ್ಕಾಗಲಿ ನಾನು ಸ್ವಕಪೋಲಕಲ್ಪಿತ ವಿಷಯಗಳನ್ನಿಲ್ಲಿ ದಾಖಲಿಸಿಲ್ಲ. ಆದ್ದರಿಂದ ಇಲ್ಲಿ ಮಹಾಜನರು ಪ್ರಾಮಾಣಿಕತೆಯನ್ನು ಶಂಕಿಸಬೇಕಿಲ್ಲ. ಎಂಥ ಚುರುಕು ಬುದ್ಧಿಯವನೂ ಇಲ್ಲಿ ಅಪ್ರಾಮಾಣಿಕತೆಯನ್ನು ಕಾಣಲಾರ.

ಇಲ್ಲಿ ನಾವು ನಾರಾಯಣಪಂಡಿತಾಚಾರ್ಯರ ಐತಿಹಾಸಿಕ ಪ್ರಜ್ಞೆಯನ್ನು ಕಾಣಬಹುದು. ಒಬ್ಬ ಇತಿಹಾಸಕಾರನಿಗೆ ಇರಬೇಕಾದ ಎಚ್ಚರಗಳನ್ನು ಇಲ್ಲಿ ನಮೂದಿಸಿದ್ದಾರೆ. ಇಂತಹ ಐತಿಹಾಸಿಕ ಪ್ರಜ್ಞೆಯುಳ್ಳ ಪಂಡಿತಾಚಾರ್ಯರಿಂದ ರಚಿತವಾದ ಶ್ರೀಮಧ್ವವಿಜಯ ಮತ್ತು ಮಣಿಮಂಜರೀ ಎಂಬ ಐತಿಹಾಸಿಕ ಕಾವ್ಯಗಳ ಪ್ರಾಮಾಣಿಕತೆಯು ಇನ್ನಷ್ಟು ಹೆಚ್ಚುತ್ತದೆ.

ಇದರಂತೆ 1918ರಲ್ಲಿ ಪ್ರಕಟಿಸಿದ ಛಲಾರಿ ಶೇಷಾಚಾರ್ಯರ "ಪ್ರಮಾಣಚಂದ್ರಿಕಾ" ಎನ್ನುವ ಗ್ರಂಥ. ಇದು ಪ್ರಾರ್ಥಮಿಕ ಜಿಜ್ಞಾಸುಗಳಿಗೆ ಮಧ್ವಸಿದ್ಧಾಂತದ ಪ್ರಕಾರ ಪ್ರಮಾಣಗಳ ವಿಷಯ ಪರಿಚಯಿಸುವ, ತುಂಬಾ ಉಪಯುಕ್ತ ಗ್ರಂಥ. ಈ ಗ್ರಂಥದ ಬಗೆಗೆ ಡಾ॥ ಬಿ.ಎನ್.ಕೆ. ಶರ್ಮ ಅವರು ಬರೆಯುತ್ತಾರೆ. ‘Pramāna Candrikā’ dealing with Dvaita logic and epistemology, in the course of a small tract for beginners is a very useful work[4].’

"ಮಾನಾಧೀನಾ ಮೇಯಸಿದ್ಧಿಃ" ಎನ್ನುವಂತೆ ಪ್ರಮೇಯಗಳ ಸರಿಯಾದ ನಿರ್ಣಯಕ್ಕೆ ಪ್ರಮಾಣಗಳ ಸ್ವರೂಪ ವಿಮರ್ಶೆ ಅತ್ಯಂತ ಅಗತ್ಯವಾದುದು. ಶ್ರೀಮನ್ಮಧ್ವಾಚಾರ್ಯರು ಪ್ರಮಾಣಗಳ ಬಗ್ಗೆ "ಪ್ರಮಾಣ ಲಕ್ಷಣ" ಎಂಬ ಗ್ರಂಥವನ್ನು ರಚಿಸಿದರು. ಇದು ಎಲ್ಲರಿಂದಲೂ ಓದಿ ಅರಗಿಸಿಕೊಳ್ಳಲಾಗದ ಗ್ರಂಥ. ಆದ್ದರಿಂದ ಶಿಷ್ಯರಿಗೆ ಸುಲಭವಾಗಲೆಂದು ಶ್ರೀಜಯತೀರ್ಥರು "ಪ್ರಮಾಣ ಪದ್ಧತಿ" ಎಂಬ ಗ್ರಂಥವನ್ನು ರಚಿಸಿದರು. ಇದೂ ಕಬ್ಬಿಣದ ಕಡಲೆ ಎನಿಸಿದ ಬಾಲರಿಗೆ ಛಲಾರೀ ಶೇಷಾಚಾರ್ಯರು "ಪ್ರಮಾಣ ಚಂದ್ರಕಾ" ಎಂಬ ಈ ಗ್ರಂಥವನ್ನು ರಚಿಸಿದರು. ಇದನ್ನು ಮಂಗಳಾಚರಣೆಯಲ್ಲಿ ಅವರೇ ಹೇಳಿಕೊಂಡಿದ್ದಾರೆ.

“ಲಕ್ಷ್ಮೀಪತೇಃ ಪದಾಂಭೋಜಯುಗಂ ನತ್ವಾ ಗುರೋರಪಿ ।
ಪ್ರಮಾಣಚಂದ್ರಿಕಾಂ ಕುರ್ಮೋ ಬಾಲಾನಾಂ ಬೋಧಸಿದ್ಧಯೆ॥” ಎಂದು.

ಮುಂದೆಯು ಬರೆಯುತ್ತಾರೆ – “यद्यपि जयार्यैरेव पद्धत्यादौ प्रमाणलक्षणादिकं सविस्तरं प्रतिपादितम् । तथापि, भावगम्भीरैरपि

4 History of the Dvaita School of Vedānta and its Literature, Dr. B.N.K. Sharma, Publisher: Motilal Banarasidass, Third Edition 2000, Page No. 501.

वाक्यैर्वर्णितमिति, नाल्पज्ञैः सुखेन शक्यते बोद्धुमिति, तेषां तद्बोधनार्थं प्रायेण तदुक्तमेव किञ्चित् प्रमेयं सङ्क्षेपेण प्रतिपादयितुमिदं प्रकरणमिति, न वैयर्थ्यदोषः ॥" ಎಂದು.

ಈ ಪ್ರಮಾಣಚಂದ್ರಿಕಾ ಗ್ರಂಥವು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳೆಂಬ ಮೂರು ಪರಿಚ್ಛೇದವುಳ್ಳದ್ದು. 1971ರಲ್ಲಿ ಇದು ಶ್ರೀ ಬೀ.ಎಸ್.ಪ್ರಾಣೇಶ ರಾವ್ ಬೆಂಗಳೂರು, ಇವರಿಂದ ಮರುಮುದ್ರಣಗೊಂಡು ಪ್ರಕಾಶಿಸಲಾಯಿತು. ಇದರಲ್ಲಿ ಪ್ರಮೇಯಪರಿಚ್ಛೇದ ಎಂಬ ನಾಲ್ಕನೇ ಪರಿಚ್ಛೇದವೂ ಸೇರಿಕೊಂಡಿತು. ಗ್ರಂಥಕರ್ತೃಗಳೇ ಪ್ರತಿಜ್ಞೆ ಮಾಡಿರುವಂತೆ ಅವರು ಶ್ರೀಜಯತೀರ್ಥರ ಪ್ರಮಾಣಪದ್ಧತಿಯನ್ನು ಅಕ್ಷರಶಃ ಅನುಕರಣೆ ಮಾಡಿದ್ದಾರೆ. ಪ್ರಮಾಣಪದ್ಧತಿಯಲ್ಲಿ ಮೂರೇ ಪರಿಚ್ಛೇದ ಇರುವುದರಿಂದ, ಪ್ರಾಯಃ ಈ ನಾಲ್ಕನೆಯ ಪರಿಚ್ಛೇದ ಪ್ರಕ್ಷಿಪ್ತ.

1912ರಲ್ಲಿ ಶ್ರೀಪಲಿಮಾರು ಮಠದ ಮೂಲಯತಿಗಳಾದ ಶ್ರೀಹೃಷೀಕೇಶ ತೀರ್ಥರ "ಸಂಪ್ರದಾಯ ಪದ್ಧತಿ"ಯನ್ನು ಪ್ರಕಾಶಿಸಿದರು. ಈ 26 ಶ್ಲೋಕಗಳ ಚಿಕ್ಕ ಕೃತಿಯಲ್ಲಿ ಶ್ರೀಮಧ್ವವಿಜಯದಲ್ಲಿ ಉಲ್ಲೇಖಿಸದ, ಆಚಾರ್ಯ ಮಧ್ವರ ಇತಿಹಾಸಾದ ಕೆಲವು ಅಪೂರ್ವ ಪ್ರಸಂಗಗಳ ಉಲೇಖ ಕಾಣುತ್ತೇವಾದ್ದರಿಂದ ಚಾರಿತ್ರಿಕ ದೃಷ್ಟಿಯಿಂದ ಇದೊಂದು ಪ್ರಮುಖ ಗ್ರಂಥ. ಪ್ರಾರಂಭದಲ್ಲಿ ಇಲ್ಲಿ ಪಾಜಕಕ್ಷೇತ್ರದ ಮಾಹಾತ್ಮ್ಯೆಯನ್ನು ವರ್ಣಿಸಲಾಗಿದೆ. ಈ ಗ್ರಂಥದ ಬಗೆಗೆ ಡಾ॥ ಬಿ.ಎನ್.ಕೆ. ಶರ್ಮ ಅವರು ಬರೆಯುತ್ತಾರೆ. – Sampradāya paddhati in 26 verses, dealing with the early life, career and work of Madhva[5].

1924ರಲ್ಲಿ ಶ್ರೀಹೃಷೀಕೇಶತೀರ್ಥರ ಕೃತಿಯೆಂದು ಊಹಿಸಲಾದ 'ಅಣುಮಧ್ವಚರಿತಮ್'ಅನ್ನು ಪ್ರಕಾಶಿಸುತ್ತಾರೆ. ಇದು ಹತ್ತೇ ಶ್ಲೋಕಗಳುಳ್ಳ ಪುಟ್ಟ ಕೃತಿ. ಈ ಗ್ರಂಥದ ವೈಶಿಷ್ಟ್ಯವೆಂದರೆ ಇಲ್ಲಿಯ ಶ್ಲೋಕವೊಂದರಲ್ಲಿ ಆಚಾರ್ಯ ಮಧ್ವರ ಜನನ ಮತ್ತು ನಿರ್ಯಾಣದ ಸಂವತ್ಸರ, ಮಾಸ ಮತ್ತು ತಿಥಿಗಳ ಬಗೆಗೆ

5 History of the Dvaita School of Vedānta and its Literature, Dr. B.N.K. Sharma, Publisher: Motilal Banarasidass, Third Edition 2000, Page No. 211.

ನಿಖರ ಮಾಹಿತಿಯು ದೊರಕುತ್ತದೆ. ಇದರಿಂದ ಅಚಾರ್ಯರ ಕಾಲವನ್ನು ಇದಮಿತ್ಥಂ ಎಂದು ನಿಶ್ಚಯಿಸಲು ಉಪಯುಕ್ತವಾಗಿದೆ.

"ಏಕೋನಾಶೀತಿವರ್ಷಾಣಿ ನೀತ್ವಾ ಮಾನುಶದೃಷ್ಟಿಗಃ ।
ಪಿಂಗಲಾಬ್ದೇ ಮಾಘಶುದ್ಧನವಮ್ಯಾಂ ಬದರೀಂ ಯಯೌ ॥"

ಅನುವಾದ – ಆಚಾರ್ಯಮಧ್ವರು ಎಪ್ಪತ್ತೊಂಬತ್ತು ವರ್ಷಗಳ ಕಾಲ ಮನುಷ್ಯರ ದೃಷ್ಟಿಗೆ ಗೋಚರವಾಗಿ ಈ ಭೂಮಿಯಲ್ಲಿದ್ದು, ಪಿಂಗಳನಾಮ ಸಂವತ್ಸರದ, ಮಾಘಮಾಸದ, ಶುದ್ಧ ನವಮಿಯಂದು ಬದರಿಗೆ ಹೋದರು. ಇದರಿಂದ ಆಚಾರ್ಯರ ಕಾಲ ಕ್ರಿ.ಶ. 1238 ರಿಂದ 1317 ಎಂದು ಇತಿಹಾಸತಜ್ಞರು ನಿಶ್ಚಯಿಸಿದ್ದಾರೆ.

ಈ ಗ್ರಂಥಕರ್ತೃವಿನ ಬಗ್ಗೆ ಸ್ಪಷ್ಟತೆಯಿಲ್ಲ. 1924ರಲ್ಲಿ ಪ್ರಕಟಿತ ಗ್ರಂಥದಲ್ಲಿ ಸಂಪಾದಕರು ಬರೆಯುತ್ತಾರೆ. – "ग्रन्थोऽयं पलिमारुमठे श्रीमध्वाचार्यसाक्षाच्छिष्य श्रीहृषीकेशतीर्थलिखिते प्राचीनपुस्तके उपलब्धः। एतेनायमपि ग्रन्थः श्रीहृषीकेशतीर्थैरेव विरचितः स्यादिति अनुमीयते ।"

ಅನಂತರ ಕೆಲವರು – "श्रीवायुपुराणोक्तम् अणुमध्वचरतम् ।" ಎಂದು ಪ್ರಕಾಶನ ಮಾಡಿದ್ದಾರೆ. ಅವರಿಗೇನು ಪ್ರಮಾಣವೋ ದೇವರೇ ಬಲ್ಲ.

ಈ ನಾಲ್ಕೂ ಗ್ರಂಥಗಳು ಶ್ರೀ ಪಾವಂಜೆ ಗುರುರಾಯರಿಂದ ಪ್ರಥಮ ಬಾರಿ ಪ್ರಕಾಶನಗೊಂಡ ಬಳಿಕ ಇನ್ನಿತರರು ಹಲವು ಬಾರಿ ಮರುಮುದ್ರಿಸಿ ಪ್ರಕಟಿಸಿದ್ದಾರೆ. ಗುರುರಾಯರು ಸಂಶೋಧಿಸಿ ಪ್ರಕಟಿಸಿದ ಈ ಸಂಸ್ಕೃತ ಗ್ರಂಥಗಳಲ್ಲಿ ಕಂಡು ಬರುವ ಸಾಮಾನ್ಯ ಸಂಗತಿಯೆಂದರೆ, ಅವು ಗಾತ್ರದಲ್ಲಿ ಸಣ್ಣದಾಗಿದ್ದರೂ, ಅಲ್ಲಿರುವ ವಿಷಯ ಅತ್ಯಂತ ಮಹತ್ವವುಳ್ಳದ್ದು.

ಇದಲ್ಲದೆ ಶ್ರೀ ತ್ರಿವಿಕ್ರಮಪಂಡಿತಾಚಾರ್ಯವಿರಚಿತಂ ಉಷಾಹರಣಂ ಮಹಾಕಾವ್ಯಂ (ಸಟೀಕಾ)[6], ಸುಭದ್ರಾಕಲ್ಯಾಣಮಹಾಕಾವ್ಯಂ (ಸಟೀಕಾ),

---

6 'ಉಷಾಹರಣಮ್' ಮಹಾಕಾವ್ಯದಲ್ಲಿ ಒಟ್ಟು 9 ಸರ್ಗಗಳಿದ್ದು ಅದಕ್ಕೆ ಶ್ರೀರಾಘವೇಂದ್ರ ಮಠದ ಪರಂಪರೆಯಲ್ಲಿ ಬಂದ ಶ್ರೀಸುಮತೀಂದ್ರತೀರ್ಥರ ವ್ಯಾಖ್ಯಾನವಿದೆ. ಈ ಗ್ರಂಥವನ್ನು 1927ರಲ್ಲಿ ಅಂದಿನ ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರ ಸೂಚನೆಯ ಮೇರೆಗೆ ಶ್ರೀ ಪಾವಂಜೆ ಗುರುರಾಯರು ಪ್ರಕಾಶನ ಗೊಳಿಸಿದರೆಂದು ತಿಳಿದುಬರುತ್ತದೆ. ಇತ್ತೀಚೆಗೆ, 2020ರಲ್ಲಿ ಈ ಗ್ರಂಥವು ದ್ವೈತ ವೇದಾಂತ ಸಂಶೋಧನ ಪರತಿಷ್ಠಾನ, ಬೆಂಗಳೂರು, ಇವರಿಂದ ಮರುಮುದ್ರಣಗೊಂಡಿದೆ.

ನೃಸಿಂಹಸ್ತುತಿಃ (ವಿಶ್ವಪತಿಟೀಕಾ), ಶಿವಸ್ತುತಿ (ವಿಶ್ವಪತಿಟೀಕಾ), ರುಗ್ಮಿಣೀಶವಿಜಯಃ, ದ್ವಾದಶಸ್ತೋತ್ರಾಣಿ, ಇತ್ಯಾದಿ ಅನೇಕ ಗ್ರಂಥಗಳು ಪ್ರಪ್ರಥಮ ಬಾರಿಗೆ, ಶ್ರೀ ಪಾವಂಜೆ ಗುರುರಾಯರ ಅವಿರತ ಪರಿಶ್ರಮದಿಂದ ಮುದ್ರಣದ ಬೆಳಕು ಕಂಡವು.

### ಶ್ರೀ ಪಾವಂಜೆ ಗುರುರಾಯರಿಂದ ಪ್ರಕಾಶಿತ ಯಕ್ಷಗಾನ ಗ್ರಂಥಗಳು

ಈ ಹಿಂದೆಯೇ ಹೇಳಿದಂತೆ ಶ್ರೀ ಪಾವಂಜೆ ಗುರುರಾಯರು ಕೈಹಾಕಿ ಅನುಪಮ ಸೇವೆ ಗೈದ ಇನ್ನೊಂದು ಕ್ಷೇತ್ರವೆಂದರೆ ಯಕ್ಷಗಾನ. ಇಲ್ಲಿ ಅವರು 'ಯಕ್ಷಗಾನ ಸಭಾಲಕ್ಷಣ–ಪೀಠಿಕೆ' ಎಂಬ ತತ್ವಪೂರ್ಣ ಗ್ರಂಥವನ್ನು ಪ್ರಕಟಿಸಿದ್ದಾರೆ. ಇದಲ್ಲದೆ ಐವತ್ತಕ್ಕೂ ಮೀರಿ ಪ್ರಸಿದ್ಧ ಯಕ್ಷಗಾನ ಪ್ರಸಂಗಗಳನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ ಕೆಲವು ಹತ್ತಾರು ಮರುಮುದ್ರಣವನ್ನು ಕಂಡಿರುವುದು ಇವುಗಳ ಪ್ರಸಿದ್ಧಿಗೆ ಮತ್ತು ಉಪಯುಕ್ತತೆಗಳಿಗೆ ದ್ಯೋತಕವಾಗಿದೆ. ಉದಾಹರಣೆಗೆ 'ಸುಧನ್ವ ಕಾಳಗ' 1984ರಲ್ಲಿ ಹದಿನಾಲ್ಕನೆ ಅಚ್ಚನ್ನು ಕಂಡಿತ್ತು. ಯಕ್ಷಗಾನ ಕಲಾರಸಿಕರು ಕರಾವಳಿಯ ವಿಭಿನ್ನ ಪಟ್ಟಣ ಮತ್ತು ಹಳ್ಳಿಗಳಿಂದ ಉಡುಪಿಗೆ ಬಂದು ಈ ಪುಸ್ತಕಗಳನ್ನು ಖರೀದಿಸಿ ಸಂಗ್ರಹಿಸುತ್ತಿದ್ದರು.

ಕರ್ನಾಟಕ ಸರ್ಕಾರದ ಉಡುಪಿ ಜಿಲ್ಲಾ ಗ್ಯಾಸೆಟಿಯರ್ (Gazetteer, English, 2012, Chapter XIV: Literature and culture)ನಲ್ಲಿ ಶ್ರೀ ಪಾವಂಜೆ ಗುರುರಾಯರ ಬಗ್ಗೆ ಹೀಗೆ ಬರೆಯುತ್ತಾರೆ –

### Publication of Yakshagana Books and Research:

Udupi has a significant role in the publication of books relating to Yakshagana.… After Pavanje Guru Rao established Sri Krishna Printing Press in Udupi and started managing 'Sriman Madhwa Siddhanta Granthalaya', Udupi itself became the centre for the publication of Yakshagana Prasanga writings. After 1920 upto 1975, this institute has printed yakshagana prasangas very impressively. Some of the prasangas have seen seven to eight editions. Editions printed by Pavanje have been considered fair editions and are popular throughout Coastal Karnataka. These editions are not edited versions. Still since they are printed faultlessly, these books

are appreciated by one and all. (page 785-786).

ಇನ್ನೊಂದು ಅಚ್ಚರಿಯ ಸಂಗತಿಯೆಂದರೆ ತುಳು ಯಕ್ಷಗಾನ ಪ್ರಸಂಗವೆಂಬ ವಿನೂತನ ಪ್ರಕಾರವನ್ನು, ಒಂದು ಶತಮಾನದ ಹಿಂದೆಯೇ ಆವಿಷ್ಕರಿಸಿ 'ತುಳು ಕಿಟ್ಣರಾಜಿಪರ್ಸಂಗೊ' ಎಂಬ ಪುಸ್ತಕವನ್ನು ಮುದ್ರಿಸಿ ಪ್ರಕಾಶನ ಮಾಡಿದವರೂ ಶ್ರೀಯುತ ಪಾವಂಜೆ ಗುರುರಾಯರೆ.

ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದಿಂದ ಪ್ರಕಾಶಿತ ಕೆಲವು ಯಕ್ಷಗಾನ ಪ್ರಸಂಗಗಳು :

| | |
|---|---|
| 1. ಅನಂತನವ್ರತ ಮಹಾತ್ಮೆ | 2. ಅಭಿಮನ್ಯು ಕಾಳಗ |
| 3. ಕರ್ಣಪರ್ವ | 4. ಉಷಾ ಪರಿಣಯ |
| 5. ಕರ್ಣಾರ್ಜುನರ ಕಾಳಗ | 6. ಕಾಲನೇಮಿ ಕಾಳಗ |
| 7. ಗದಾಪರ್ವ | 8. ಜರಾಸಂಧ ವಧೆ |
| 9. ತಾಮ್ರಧ್ವಜನ ಕಾಳಗ | 10. ದ್ರೌಪದೀ ಪ್ರತಾಪ |
| 11. ದ್ರೌಪದೀ ವಸ್ತ್ರಾಪಹಾರ | 12. ನೀಲಧ್ವಜ ಕಾಳಗ |
| 13. ಬ್ರಹ್ಮಕಪಾಲ | 14. ಪದ್ಮಾವತೀ ಕಲ್ಯಾಣ |
| 15. ಸುಧನ್ವ ಕಾಳಗ | 16. ವೀರಮಣಿ ಕಾಳಗ |
| 17. ಗಿರಿಜಾ ಕಲ್ಯಾಣ | 18. ಬಿಲ್ಲಹಬ್ಬ ಅಥವಾ ಕಂಸವಧೆ |
| 19. ತರಣಿಸೇನಾ ಕಾಳಗ | 20. ಭದ್ರಾಯುಚರಿತ್ರೆ |
| 21. ಭಸ್ಮಾಸುರ–ಮೋಹಿನಿ | 22. ಮೀನಾಕ್ಷಿಕಲ್ಯಾಣ |
| 23. ರತ್ನಾವತೀಕಲ್ಯಾಣ | 24. ಲಕ್ಷಣಾಕಲ್ಯಾಣ |
| 25. ವಾಲಿಸುಗ್ರೀವ ಕಾಳಗ | 26. ವಿಶ್ವಾಮಿತ್ರ ಪ್ರತಾಪ |
| 27. ಸಮುದ್ರಮಥನ | 28. ಸುಭದ್ರಾ ಕಲ್ಯಾಣ |
| 29. ಸೌಗಂಧಿಕಾಹರಣ | 30. ಕುಂಭಕರ್ಣ ಕಾಳಗವು |
| 31. ಸುಬಾಹು ಕಾಳಗ | 32. ಹಿರಣ್ಯಾಕ್ಷನ ವಧೆ |
| 33. ಶಕುಂತರಾಜ ಚರಿತೆ | 34. ಕುಮುದಾಕ್ಷಿ ಕಲ್ಯಾಣ |
| 35. ಪಾಂಡವ ವಿಜಯ | 36. ಶಂಬರಾಸುರನ ಕಾಳಗ |
| 37. ದ್ರೋಣಪರ್ವ | 38. ಯೋಗಿನೀ ಕಲ್ಯಾಣ |
| 39. ಕೃಷ್ಣಸಂಧಾನ | 40. ಹರಿಶ್ಚಂದ್ರಚರಿತೆ |

41. ರಾವಣಾಸುರನ ಕಾಳಗ
42. ಅಂಧಕಾಸುರನ ಕಾಳಗ
43. ದ್ರೌಪದೀ ಸ್ವಯಂವರ
44. ಚಂದ್ರಾವಳೀ ಪ್ರಸಂಗ
45. ಧ್ರುವಚರಿತ್ರೆ
46. ಪ್ರಹ್ಲಾದಚರಿತ್ರೆ

ಇವುಗಳಲ್ಲಿ 'ತಾಮ್ರಧ್ವಜನ ಕಾಳಗ', 'ಭಸ್ಮಾಸುರ ಮೋಹಿನಿ', 'ಸೌಗಂಧಿಕಾಹರಣ' ಇತ್ಯಾದಿಗಳು ಗುರುರಾಯರ ಮರಣೋತ್ತರದಲ್ಲಿ ಅವರ ಮಕ್ಕಳಿಂದ ಮೊದಲಬಾರಿ ಪ್ರಕಟವಾದದ್ದು.

ಶ್ರೀ ಗುರುರಾಯರಿಂದ ಪ್ರಕಾಶಿತವಾದ ಯಕ್ಷಗಾನ ಪ್ರಸಂಗಗಳು ಬಹಳ ವ್ಯಾಪಕವಾದದ್ದು. ಪ್ರಯಃ ಇದುವೆರೆಗೂ ಯಾರೂ ಪ್ರಕಾಶಿಸದಷ್ಟು ಯಕ್ಷಗಾನ ಪ್ರಸಂಗ ಗ್ರಂಥಗಳನ್ನು ಇವರು ಪ್ರಕಾಶಿಸಿದ್ದಾರೆ ಎಂದರೆ ತಪ್ಪಾಗಲಾರದು.

ಅವರ ಯಕ್ಷಗಾನ ಪ್ರಸಂಗಗಳ ಪ್ರಕಾಶನದ ಅಧ್ಯಯನವೇ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಯ ವಿಷಯವಾಗಬಹುದು.

**ಶ್ರೀ ಪಾವಂಜೆ ಗುರುರಾಯರ ಕೌಟುಂಬಿಕ ಜೀವನ :**

ಶ್ರೀ ಪಾವಂಜೆ ಗುರುರಾಯರು ತಮ್ಮ ಎಪ್ಪತ್ತೊಂಬತ್ತು ವರ್ಷಗಳ ಸುದೀರ್ಘ ಜೀವನದ ಕೊನೆಗಾಲದಲ್ಲಿ ಗಾಂಧೀವಾದಿಯಾಗಿದ್ದರು. ಹಾಗೆಂದ ಮಾತ್ರಕ್ಕೆ ಅವರೆಂದೂ ಗಾಂಧಿ ಹೇಳಿದ ಎಲ್ಲವನ್ನು ವೇದವಾಕ್ಯವೆಂದು ವಿಮರ್ಶಿಸದೆ ಸ್ವೀಕರಿಸುತ್ತಿರಲಿಲ್ಲ. ಗಾಂಧಿಯ ಹೇಳಿಕೆಯಲ್ಲಿ ಪರಿಗ್ರಾಹ್ಯವಾದ ಅಂಶವನ್ನು ಸ್ವೀಕರಿಸುತ್ತಿದ್ದರು. ಅವರೆಂದೂ ರಾಜಕೀಯಕ್ಕೆ ಇಳಿದವರಲ್ಲ; ಚಳುವಳಿ ಮಾಡಿದವರಲ್ಲ; ಸೆರೆಮನೆಗೆ ಹೋದವರಲ್ಲ; ದೊಡ್ಡ ದೇಶಪ್ರೇಮಿ ಎಂದು ಹೇಳಿಕೊಂಡು ತಿರುಗುತ್ತಿದ್ದವರಲ್ಲ; ಈ ಬಂಡವಾಳದಿಂದ ಸಮಾಜದಲ್ಲಿ ಅಧಿಕಾರ ಲಾಭವನ್ನು ಪಡೆದವರಲ್ಲ. ಗಾಂಧಿಯಂತೆ ಸಾಹಿತ್ಯಪ್ರೇಮ ಮತ್ತು ಸ್ವರಾಜ್ಯನಿಷ್ಠೆಯನ್ನು ತಮ್ಮದಾಗಿಸಿಕೊಂಡಿದ್ದರು. ಸತ್ಯ–ಅಹಿಂಸೆ–ಸದಾಚಾರ ಮುಂತಾದ ಜೀವನದ ಸೂತ್ರಗಳನ್ನು ಅನುಷ್ಠಾನಕ್ಕೆ ತಂದಿದ್ದರು. ಗಾಂಧಿಯ ಸನಾತನಧರ್ಮದ ಶ್ರದ್ಧೆ, ದೈವಭಕ್ತಿ, ಸರಳಜೀವನ, ನಿಸ್ಪೃಹತೆ, ಪ್ರಾಮಾಣಿಕತೆ, ನೇರ ನುಡಿ, ನಿಃಸ್ವಾರ್ಥ ಸಮಾಜಸೇವೆ, ಕೌಟುಂಬಿಕ ನಿಷ್ಠೆ, ಭ್ರಷ್ಟಾಚಾರವಿಲ್ಲದ ವ್ಯಾಪಾರ ಅವರದಾಗಿತ್ತು. ಗಾಂಧಿಯಂತೆ ಗುರುರಾಯರೂ ಜನ್ಮ ತಾಳಿದ್ದು 1869

ಇಸವಿಯಲ್ಲಿ ಮತ್ತು ಇಬ್ಬರೂ ಕೊನೆಯುಸಿರು ಎಳೆದದ್ದು 1948 ಇಸವಿಯಲ್ಲಿ. ಕಾಕತಾಳೀಯವಾಗಿ ಇದು ಕೂಡ ಅವರಿಬ್ಬರಲ್ಲಿದ್ದ ಸಾಮ್ಯತೆ.

ಗುರುರಾಯರಿಗೆ ಸಂಸಾರ ಜೀವನದ ಏರಿಳಿತಗಳು ಇರಲಿಲ್ಲವೆಂದಲ್ಲ. ಅವರು ತಮ್ಮ ಸುಮಾರು ಐವತ್ತರ ವಯಸ್ಸಿನಲ್ಲಿ ಪತ್ನಿಯನ್ನು ಕಳೆದುಕೊಂಡರು. ಮನೆಯಲ್ಲಿ ಎಲ್ಲಾ ಹೆಣ್ಣು ಮಕ್ಕಳು. ಎಲ್ಲರಿಗೂ ವಿವಾಹ ಮಾಡಿದ್ದರು. ಪತ್ನಿ ಪದ್ಮಾವತಿಬಾಯಿ ಗುರುರಾಯರ ಸಾರಸ್ವತ ಜೀವನದಲ್ಲಿ, ಅಥಿತಿ ಅಭ್ಯಾಗತರ ಸೇವೆಯಲ್ಲಿ ಗಂಡನನ್ನು ನೆರಳಿನಂತೆ ಅನುಸರಿಸುತ್ತಿದ್ದರು. ಅವರು ತೀರಿಕೊಂಡಮೇಲೆ ಗುರುರಾಯರು ಮತ್ತೆ ವಿವಾಹವಾಗಿ ಮನೆ ತುಂಬಿಸಿಕೊಂಡದ್ದು ರಮಾದೇವಿ ಎಂಬುವವರನ್ನು. ಇವರಿಗೆ ಒಂದರ ನಂತರ ಇನ್ನೊಂದೆಂಬಂತೆ ಏಳು ಮಂದಿ ಮಕ್ಕಳಾದರು. ಇಬ್ಬರು ಗಂಡು ಮಕ್ಕಳು, ಹಾಗು ಐದು ಹೆಣ್ಣು ಮಕ್ಕಳು. ಈ ಹೆಣ್ಣು ಮಕ್ಕಳ ಹೆಸರುಗಳು ಕ್ರಮವಾಗಿ ರಾಜೀವಿ, ಅಂಬುಜವಲ್ಲಿ, ವಸುಂಧರ, ಯಶೋಧರ ಮತ್ತು ತಾರ.

ಶ್ರೀ ಪಾವಂಜೆಯವರ ಮೊದಲನೆಯ ಹೆಂಡತಿಯ ಹಿರಿಯ ಮಗಳು ಜಾನಕಿಬಾಯಿ. ಇವರ ವಿವಾಹ ಸುಖಮಯವಾಗಿರಲಿಲ್ಲ. ಪತಿಯಿಂದ ದೂರವಿದ್ದು ಹೆಣ್ಣುಮಕ್ಕಳಿಗಾಗಿ ಒಂದು ಶಾಲೆಯನ್ನು ನಡೆಸುತ್ತಿದ್ದರು. ಎರಡನೆ ಮಗಳು ಸರಸ್ವತಿಬಾಯಿಯವರನ್ನು ಅವರು ತಿರುವನಂತಪುರದ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದ ಮಹಾಮಹೋಪಾಧ್ಯಾಯ ಪದ್ಮನಾಭ ಶಾಸ್ತ್ರಿಯವರೊಡನೆ ವಿವಾಹ ಮಾಡಿಕೊಟ್ಟರು.

ಶ್ರೀ ಪಾವಂಜೆ ಗುರುರಾಯರ ಮೂರನೆ ಮಗಳು ಮಂದಾಕಿನಿಬಾಯಿ ವಿವಾಹವಾದರೂ ಪತಿಯಿಂದ ದೂರವಾಗಿ ಸ್ವತಂತ್ರಜೀವನ ನಡೆಸಬೇಕಾದ ಪರಿಸ್ಥಿತಿ ಒದಗಿ ಬಂತು. ಅವರು ದಿಟ್ಟತನದಿಂದ ಮತ್ತೆ ಸ್ಕೂಲುಕಾಲೇಜು ಸೇರಿ ಓದಿದರು. ಆ ಕಾಲದಲ್ಲೇ ಬಿ.ಎ. ಪದವೀಧರೆಯಾಗಿ, ಮುಂದಕ್ಕೆ ಓದಿ ಹಿಂದಿ ಭಾಷೆಯಲ್ಲಿ ಎಂ.ಎ.ಪದವಿ ಗಳಿಸಿ ಮದರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲಿ ಹಿಂದಿ ಅಧ್ಯಾಪಕಿಯಾಗಿ ಕೆಲಸಕ್ಕೆ ಸೇರಿ ಪ್ರಾಧ್ಯಾಪಕಿಯಾಗಿ ನಿವೃತ್ತರಾದರು. ನಿವೃತ್ತಿಯ ನಂತರ ತಾವು ಗಳಿಸಿದ ಹಣದಲ್ಲಿ 50,000 ರೂಪಾಯಿಗಳನ್ನು ಮಾಧ್ವವಾಙ್ಮಯ ಪ್ರಸಾರಕ್ಕಾಗಿ ವಿದ್ಯಾರ್ಥಿಗಳಿಗೆ ನೆರವಾಗಲು ದತ್ತಿಯಾಗಿ

ನೀಡಿದರು. ತಮ್ಮ ತಂದೆಯ ಸ್ಮರಣಾರ್ಥವಾಗಿ ಎಂ.ಜಿ.ಎಂ. ಕಾಲೇಜಿನಲ್ಲಿ 5,000 ರೂಪಾಯಿಗಳನ್ನು ಠೇವಣಿ ಇಟ್ಟು ಅದರ ಬಡ್ಡಿಯಿಂದ ಹರಿದಾಸರ ಕೀರ್ತನೆಯ ಸ್ಪರ್ಧೆಯಲ್ಲಿ ವಿಜೇತರಿಗೆ ಬಹುಮಾನ ಕೊಡಲು ಏರ್ಪಡಿಸಿದರು.

ಶ್ರೀ ಪಾವಂಜೆ ಗುರುರಾಯರ ನಾಲ್ಕನೆ ಮಗಳು ಭಾರತಿ. ಇವರು ಶ್ರೀಯುತ ಎಸ್.ಯು.ಪಣಿಯಾಡಿ (ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿ) ಎಂಬುವವರನ್ನು ವಿವಾಹವಾದರು. ಪಣಿಯಾಡಿಯವರು ನಿಷ್ಠಾವಂತ ಗಾಂಧಿ ಭಕ್ತರು. ಉಡುಪಿಯ ಸಾಮಾಜಿಕ ಕಾರ್ಯಕರ್ತರು. ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ, ಸೆರೆಮನೆಗೂ ಹೋದ ಮಹನೀಯರು. ಇವರು ಮಾಡಿದ ತುಳು ಭಾಷಾ ಸೇವೆ ಅನುಪಮವಾದುದು. ಇವರು ತುಳುನಾಡ ಪ್ರೆಸ್, ತುಳು ಸಾಹಿತ್ಯಮಾಲೆ, ತುಳು ಕಾದಂಬರಿ, ತುಳು ವ್ಯಾಕರಣ ಇತ್ಯಾದಿಗಳನ್ನು ಬರೆದು, ತುಳುನಾಡ್ ಬ್ಯಾಂಕ್ ಸ್ಥಾಪನೆಗೆ ಕಾರಣೀಭೂತರಾದರು. ಇವರ ಮಕ್ಕಳಲ್ಲಿ ವಾದಿರಾಜ, ಜವಾಹರ ಮತ್ತು ಹರಿಣಿಯವರು ಕಲೋಪಾಸಕರಾಗಿ ಚಿತ್ರರಂಗವನ್ನು ಪ್ರವೇಶಿಸಿ ಹೆಸರು ಗಳಿಸಿದರು.

ಶ್ರೀ ಗುರುರಾಯರು 1920 ರಿಂದ 1935 ತನಕದ ಕಾಲಘಟ್ಟದಲ್ಲಿ ಹೆಚ್ಚಿನ ಪುಸ್ತಕಗಳನ್ನು ಮುದ್ರಿಸಿ ಪ್ರಕಾಶನಗೊಳಿಸಿದರು. ಈ ಅವಧಿಯಲ್ಲಿ ಅವರು ತಮ್ಮ ಆಧ್ಯಾತ್ಮ ಮತ್ತು ಸಾಹಿತ್ಯ ಸೇವೆಯ ಕನಸನ್ನು ಅವಿರತ ಪರಿಶ್ರಮದಿಂದ ನನಸುಗೊಳಿಸಿದರು. ಇದು ಅವರು ಜೀವನದಲ್ಲಿ ಸಾಫಲ್ಯದ ಶಿಖರವನ್ನು ಕಂಡ ಕಾಲಘಟ್ಟ ಎಂದರೆ ತಪ್ಪಾಗಲಾರದು.

ಶ್ರೀ ಎಸ್.ಕೆ.ಶ್ರೀಪತಿ ಆಚಾರ್ಯರು ಗರುರಾಯರ ವ್ಯಾವಹಾರಿಕ ಚಾಕಚಕ್ಯತೆಯ ಬಗ್ಗೆ ಹೇಳುತ್ತಾರೆ "ಒಂದೆಡೆ ಪುಸ್ತಕಾಲಯದ ಏರುತ್ತಿರುವ ವ್ಯವಹಾರ ಮತ್ತೊಂದೆಡೆ ವೃದ್ಧಿಯಾಗುತ್ತಿರುವ ಮುದ್ರಣಾಲಯದ ಕಾರ್ಯರೂಪಗಳಿಂದಾಗಿ 'ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು' ಎಂಬ ಗಾದೆಯಂತೆ ಈ ಎರಡು ವ್ಯವಹಾರಗಳನ್ನು ಸರಿದೂಗುವುದು ಕಷ್ಟಸಾಧ್ಯವಾದಾಗ ಅವರು ಬಿ.ಎ. ಪದವೀಧರರಾದ ಶ್ರೀ ಬಿ.ರಾಮಕೃಷ್ಣಾಚಾರ್ಯರನ್ನು 1933ರಲ್ಲಿ ಮುದ್ರಣಾಲಯದ ಕಾರ್ಯಾಧ್ಯಕ್ಷರನ್ನಾಗಿ ನೇಮಿಸಿಕೊಂಡರು. ಶ್ರೀ ಆಚಾರ್ಯರ ದ್ವಿಗುಣಿತವಾದ ಉತ್ಸಾಹದಿಂದ ಮುದ್ರಣಾಲಯದ ಕಾರ್ಯವು ಭರದಿಂದ

ಸಾಗಿಬಂದುದನ್ನು ಮನಗಂಡ ರಾಯರು ಅವರೊಡನೆ ಮನಃಪೂರ್ವಕವಾಗಿ ಸಹಕರಿಸಿದರು. ಮುಂದೆ (1943) ಬಿ. ರಾಮಕೃಷ್ಣಾಚಾರ್ಯರು ತಮ್ಮದೇ ಆದ ಮುದ್ರಣಾಲಯವನ್ನು ಆರಂಭಿಸಿದರು. ಅವರು ಅನುಕೂಲಸ್ಥಿತಿಗೇರಿದಮೇಲೂ ತಮಗೆ ಜೀವನಕ್ಕೆ ಒಂದು ಮಾರ್ಗ ತೋರಿಸಿದ ಶ್ರೀ ಗುರುರಾಯರ ಪ್ರೀತಿ ವಿಶ್ವಾಸಗಳನ್ನೂ, ವ್ಯವಹಾರ ಕೌಶಲವನ್ನೂ ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

ಪಾವಂಜೆ ಗುರುರಾಯರು ಸಾತ್ವಿಕರಾದರೂ ವ್ಯವಹಾರಕುಶಲರು. ಅವರು ತಮ್ಮನಂತರ ಮಕ್ಕಳಲ್ಲಿ ವಿವಾದ ಹುಟ್ಟಬಾರದೆಂದು ಬದುಕಿದ್ದಾಗಲೇ ಒಂದು ವ್ಯವಸ್ಥೆ ಮಾಡಿದ್ದರು. ಮುದ್ರಣಾಲಯವನ್ನು ಒಬ್ಬ ಮಗ ಮಧ್ವಮುನಿರಾಯರಿಗೂ, ಪುಸ್ತಕದ ಪ್ರಕಾಶನ ಹಾಗು ಮಾರಾಟವನ್ನು ಇನ್ನೊಬ್ಬ ಮಗ ಸೇತುಮಾಧವರಾಯರಿಗೂ ಒಪ್ಪಿಸಿ, ತಾವು ಅಂದು ಆರಂಭಿಸಿದ ಈ ಉದ್ಯಮಗಳು ಇಂದೂ ಲಾಭದಾಯಕವಾಗಿ ನಡೆದುಬರುವಂತೆ ವ್ಯವಸ್ಥೆ ಮಾಡಿದ್ದಾರೆ. ಇದು ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ."

ಶ್ರೀ ಗುರುರಾಯರು ಸಮಾಜಕ್ಕೆ ಏನನ್ನಾದರೂ ಹೊಸತನ್ನು ಕೊಡಬೇಕೆಂದು ಸದಾ ಹಂಬಲಿಸುತ್ತಿದ್ದರು. ಮಧ್ವಸಿದ್ಧಾಂತ ಮತ್ತು ಆಧುನಿಕ ವಿದ್ಯಾಭ್ಯಾಸ ಇವೆರಡರ ಮಹತ್ವವನ್ನು ಮನಗಂಡ ಅವರು, ಮುಂದಿನ ತಲೆಮಾರುಗಳಿಗೆ ಸಂಸ್ಕೃತ ಮತ್ತು ಮಧ್ವಶಾಸ್ತ್ರದ ಶಿಕ್ಷಣ ಸುವ್ಯವಸ್ಥಿತ ರೀತಿಯಲ್ಲಿ ನಡೆಯಬೇಕೆಂಬ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು, ಉಡುಪಿಯಲ್ಲಿ ಸಂಸ್ಕೃತ ಕಾಲೇಜನ್ನು ಸ್ಥಾಪಿಸುವ ಕನಸನ್ನು ಕಂಡು, ಅದರಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದಕ್ಕಾಗಿ ಅಂದಿನ ಶ್ರೀ ಅದಮಾರುಮಠದ ಶ್ರೀವಿಭುದಪ್ರಿಯತೀರ್ಥ ಶ್ರೀಪಾದಂಗಳವರು "ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀಸಭಾ" ಎಂಬ ಸಂಸ್ಥೆಯನ್ನು ಕಟ್ಟಿದರು. ಎಲ್ಲಾ ಅಷ್ಟಮಠಗಳ ಯತಿಗಳ ಮುಂದಾಳತ್ವದಲ್ಲಿ ಮತ್ತು ಉಡುಪಿಯ ಇತರ ಗಣ್ಯವ್ಯಕ್ತಿಗಳ ಸಹಾಯದಿಂದ 1919ರಲ್ಲಿ ಉಡುಪಿಯಲ್ಲಿ ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ (ಎಸ್.ಎಮ್.ಎಸ್.ಪಿ. ಸಂಸ್ಕೃತ ಕಾಲೇಜು) ಸ್ಥಾಪನೆಯಾಯಿತು. ಇಂದು ಉಡುಪಿಯಲ್ಲಿರುವ ಸಂಸ್ಕೃತ ಕಾಲೇಜನ್ನು ಸ್ಥಾಪಿಸಲು ಮೂಲ ಕಾರಣಪುರುಷರು ಇವರು ಎನ್ನುವುದು ಎಷ್ಟು ಮಂದಿಗೆ ಗೊತ್ತಿದೆ?

ಇಂಗ್ಲೀಷ್ ಬಲ್ಲ ಗುರುರಾಯರು ಈ ಕಾಲೇಜಿನ ಸರಕಾರ ಮತ್ತು ಇತರೆ ಸಂಘ–ಸಂಸ್ಥೆಗಳೊಡನೆ ಪತ್ರ ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದು, ಕೆಲವು ವರ್ಷಗಳ ಕಾಲ ಅಲ್ಲಿಯ ವಿದ್ಯಾರ್ಥಿಗಳಿಗೆ ಅಧ್ಯಾಪಕರಾಗಿ ಬೋಧಿಸಿ, ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಸಂಸ್ಕೃತ ಕಾಲೇಜಿನ ಸಂಬಂಧ ರಾಯರಿಗೆ ಕೊನೆಯವರೆಗೂ ಇತ್ತು. ರಾಯರು ಗತಿಸಿದ ನಂತರವೂ ಅವರ ಮಗ ಶ್ರೀಸೇತುಮಾಧವರಾಯರು ಸುಮಾರು 1994ರ ತನಕವೂ, ಈ ಕಾಲೇಜಿನ ಗೌರವ ಖಜಾಂಚಿಗಳಾಗಿದ್ದರು (Honorary Treasurer).

ಗುರುರಾಯರು ದೈವಭಕ್ತರು. ತಮ್ಮ ಪೂಜಾ ಉಪಕರಣಗಳನ್ನು ತಾವೇ ತೊಳೆದು ಸ್ವಚ್ಛಗೊಳಿಸಬೇಕು. ಬೆಳಿಗ್ಗೆ ನಾಲ್ಕು–ಐದು ಗಂಟೆಗೆ ಏಳುತ್ತಿದ್ದರು. ತುಳಸಿ–ಹೂಗಳ ಸಂಗ್ರಹ ಮುಗಿಸಿದಮೇಲೆ, ಅವಕಾಶವಾದರೆ ಮಧ್ವ ಸರೋವರಕ್ಕೆ ಹೋಗಿ ಸ್ನಾನಮಾಡಿ, ಸ್ವಾಮಿದರ್ಶನ ಮಾಡಿ ಬರುತ್ತಿದ್ದರು. ಅನಂತರ ಮನೆಯ ಪೂಜೆ. ಸರಿಯಾಗಿ ಎಂಟು ಗಂಟೆಗೆ ಫಲಾಹಾರ ಮಾಡಿ ಅಂಗಡಿಗೆ ಬಂದರೆ ಹನ್ನೆರಡು ಗಂಟೆಗೆ ಅದನ್ನು ಮುಚ್ಚುತ್ತಿದ್ದರು. ಅನಂತರ ಊಟ ವಿಶ್ರಾಂತಿ. ಮತ್ತೆ ಎರಡು ಗಂಟೆಗೆ ಅಂಗಡಿಗೆ ಹಾಜರು. ಸಂಜೆ ವ್ಯಾಪಾರದ ಜೊತೆಗೆ ಗೆಳೆಯರೊಡನೆ ವಿಚಾರ ವಿನಿಮಯ. ರಾತ್ರಿ ಎಂಟು ಗಂಟೆಗೆ ಮನೆಗೆ ಹಿಂದಿರುಗಿದ ಮೇಲೆ ಮತ್ತೆ ಪೂಜೆ, ಫಲಾಹಾರ. ಅನಂತರ ರಾತ್ರಿ ಒಂದು ಗಂಟೆಯ ತನಕ ಬರವಣಿಗೆ, ಪ್ರೂಫ್ ನೋಡುವುದು, ಗ್ರಂಥಪಠನ, ಪತ್ರವ್ಯವಹಾರ ಇತ್ಯಾದಿ ಬಿಡುವಿಲ್ಲದ ಕಾರ್ಯಕ್ರಮ. ಕೇವಲ ಮೂರು–ನಾಲ್ಕು ತಾಸು ನಿದ್ರೆ. ಮತ್ತೆ ಹೊಸದಿನ ಆರಂಭವಾಗುತ್ತಿತ್ತು. ಹೀಗೆ ಕರಾರುವಾಕ್ಕಾಗಿ ಅವರ ದಿನಚರಿ ನಡೆಯುತ್ತಿತ್ತು.

ತಾವು ಸಂಕಲ್ಪಿಸಿದ ಮಹತ್ತರ ಕಾರ್ಯವನ್ನು ಗುರಿಮುಟ್ಟಿಸಿ, ಸಾಫಲ್ಯದ ಉತ್ತುಂಗಕ್ಕೇರಿ, ಭಗವಂತನು ತನಗಾಗಿ ಕಾಯ್ದಿರಿಸಿದ ಕರ್ತವ್ಯವನ್ನು ತೃಪ್ತಿಕರವಾಗಿ ಪೂರೈಸಿದೆನೆಂಬ ನೆಮ್ಮದಿಯಿಂದ 23–9–1948 ರಂದು ಶ್ರೀ ಗುರುರಾಯರು ಶ್ರೀಕೃಷ್ಣನ ಸ್ಮರಣೆ ಮಾಡುತ್ತಲೇ ಆ ಸ್ವಾಮಿಯ ಪಾದ ಸೇರಿದರು.

ಶ್ರೀ ಗುರುರಾಯರ ಎರಡು ಗಂಡುಮಕ್ಕಳ ಪೈಕಿ ಹಿರಿಯರಾದ ಶ್ರೀ ಮಧ್ವಮುನಿರಾಯರು ಶ್ರೀಕೃಷ್ಣಮುದ್ರಣಾಲಯದ ವ್ಯವಹಾರವನ್ನು

ನೋಡಿಕೊಳ್ಳುತ್ತಿದ್ದರು. ಕಿರಿಯರಾದ ಶ್ರೀಸೇತುಮಾಧವರಾಯರು ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ (ಪುಸ್ತಕದ ಅಂಗಡಿಯ) ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರು. ಪುಸ್ತಕದ ಪ್ರತಿಗಳು ಮಾರಾಟವಾಗಿ ಮುಗಿಯಲು, ಮರುಮುದ್ರಣ ಮಾಡಿಸುತ್ತಾ ಅಂಗಡಿಯನ್ನು ಸುಮಾರು 1995ರ ತನಕ ನೋಡಿಕೊಂಡರು. ತದನಂತರ ವೃದ್ಧಾಪ್ಯದ ಕಾರಣ ಅಂಗಡಿಯನ್ನು ಬೇರೆಯವರಿಗೆ ವಹಿಸಿಕೊಟ್ಟು ನಿವೃತ್ತರಾದರು.

ಶ್ರೀ ಪಾವಂಜೆ ಗುರುರಾಯರು ಕರ್ಮಯೋಗಿಗಳಾಗಿದ್ದರು. ಮಾತನಾಡುತ್ತಿದ್ದುದು ಕಡಿಮೆ. ಆದರೆ ಮಾಡುತ್ತಿದ್ದ ಕೆಲಸ ಅಪಾರ. ಅವರೇನು ಶುಷ್ಕವೇದಾಂತಿಯಾಗಿರಲಿಲ್ಲ. ಕಾಡುಹರಟೆ ಸೇರುತ್ತಿರಲಿಲ್ಲ. ಗಂಭೀರತೆ ಅವರ ಸಹಜಸ್ವಭಾವ. ಅವರು ಭಾಷಣಕಾರರು ಆಗಿರಲಿಲ್ಲ. ಅವರಿಗೆ ಸಭೆ ಸಮಾರಂಭಗಳು ಒಗ್ಗುತ್ತಿರಲಿಲ್ಲ. ಒಮ್ಮೆ ಡಾ॥ ಟಿ.ಎಂ.ಎ.ಪೈ ಅವರು ಗುರುರಾಯರನ್ನು ಸನ್ಮಾನಿಸಬೇಕೆಂದು ಪ್ರಯತ್ನಿಸಿದಾಗ ಅವರು ನಿಷ್ಠುರವಾಗಿ ನಿರಾಕರಿಸಿದರಂತೆ.

ಅವರ ಮರಣೋಪರಾಂತವಾಗಿ, 1965ರಲ್ಲಿ ಉಡುಪಿಯ ಶ್ರೀಕನಕದಾಸ ಚತುರ್ಥ ಶತಮಾನೋತ್ಸವ ಸಮಿತಿಯವರು, ಪಾವಂಜೆ ಗುರುರಾವ್ ಅಂಡ್ ಸನ್ಸ್ ಸಂಸ್ಥೆಗೆ ಸನ್ಮಾನ ಮಾಡಿದರು. ಆ ಕಾಲದಲ್ಲಿ ಅರ್ಪಿಸಿದ ಅಭಿನಂದನ ಪತ್ರದಲ್ಲಿ ಪಾವಂಜೆಯವರ ಸೇವೆಯನ್ನು ಮುಕ್ತಕಂಠದಿಂದ ಸ್ಮರಿಸಿಕೊಳ್ಳಲಾಗಿದೆ. ಈ ಪತ್ರದ ಪ್ರತಿಯೊಂದನ್ನು ಅನುಬಂಧದಲ್ಲಿ ಕೊಡಲಾಗಿದೆ.

ಈ ಅಭಿನಂದನಪತ್ರದಲ್ಲಿ ಬರೆದಿದೆ "ಪಾವಂಜೆ ಗುರುರಾಯರು ಕನ್ನಡ ಜನಕ್ಕೆ ಚಿರಪರಿಚಿತವಾದ ಹೆಸರು. ಸುಮಾರು 60 ವರ್ಷಗಳ ಕೆಳಗೆ ಅವರು ಉಡುಪಿಗೆ ಬಂದು ನೆಲೆಸಿ ಮೊತ್ತಮೊದಲ ಬಾರಿಗೆ ಪೂಜಾ ಮತ್ತು ಸಂಧ್ಯಾವಂದನ ವಿಧಿಗಳನ್ನು ಕನ್ನಡ ಲಿಪಿಯಲ್ಲಿ ಅಚ್ಚುಮಾಡಿಸಿದರು. ಪಾವಂಜೆಯಲ್ಲಿ ಹುಟ್ಟಿ, ತಿರುವಾಂಕೂರಿನಲ್ಲಿ ಕಲಿತು, ಆಯುರ್ವೇದ ಪಂಡಿತರಾಗಿ ಉಡುಪಿಯನ್ನು ಪ್ರವೇಶಿಸಿದ ಅವರು ಕನ್ನಡದ ಕ್ರಾಂತಿಕಾರಿ ಪ್ರಕಾಶಕರಲ್ಲಿ ಅಗ್ರಗಣ್ಯರು. ಮಂತ್ರ ಗ್ರಂಥಗಳನ್ನು ಅಚ್ಚಿನ ಮನೆಗೊಯ್ಯುವುದೇ ಮಹಾಪರಾಧ ಎಂದು ಭಾವಿಸಿದ್ದ ಕಾಲದಲ್ಲಿ ಅವರು ಸಮಾಜದ ಎಲ್ಲ ಪ್ರತಿಕ್ರಿಯೆಗಳನ್ನು ದಿಟ್ಟತನದಿಂದ ಸ್ವಾಗತಿಸಿ ತಮ್ಮ ಪ್ರಕಾಶನವನ್ನು ಮುಂದುವರೆಸಿದರು. ಅದಕ್ಕಾಗಿ ಸ್ವಂತ

ಮುದ್ರಣಾಲಯವನ್ನು ಸ್ಥಾಪಿಸಿದರು. ಇಂದು ಮಧ್ವಸಿದ್ಧಾಂತ ಗ್ರಂಥಾಲಯ ಎಂಬ ಹೆಸರನ್ನು ಕೇಳದ ಕನ್ನಡಿಗ ವಿರಳ; ಏಕೆಂದರೆ ಇಂಥ ಅಪೂರ್ವ ಮತ್ತು ಅಪೂರ್ವವಾದ ಪುಸ್ತಕಗಳನ್ನು ಪ್ರಕಾಶಿಸುತ್ತಿರುವ ಸಂಸ್ಥೆ ಕನ್ನಡದಲ್ಲಿ ಇದೊಂದೇ. ಆ ಕಾಲದಲ್ಲಂತೂ ಇದೊಂದು ಪವಾಡವೆಂದರೂ ತಪ್ಪಲ್ಲ. ಶ್ರೀಗುರುರಾಯರ ಸಾಹಸದ ಫಲವಾಗಿಯೇ ಇಂದು ಅನೇಕ ವೇದಾಂತಗ್ರಂಥಗಳು ಕನ್ನಡದಲ್ಲಿ ಅನುವಾದಿಸಲ್ಪಟ್ಟು ಜನಸಾಮಾನ್ಯರನ್ನು ಮುಟ್ಟುವಂತಾಗಿವೆ. ನೂರಾರು ಯಕ್ಷಗಾನ ಪ್ರಸಂಗಗಳನ್ನು ಪ್ರಕಟಿಸಿ ಜಿಲ್ಲೆಯ ಕಲಾರಂಗಕ್ಕೆ ಅವರು ಅಪೂರ್ವವಾದ ಸೇವೆಯನ್ನು ಸಲ್ಲಿಸಿದರು.

ಶ್ರೀ ರಾಯರು ತುಳಿದ ದಾರಿಯನ್ನೆ ತುಳಿಯುವವರಲ್ಲ. ಏನನ್ನಾದರೂ ಹೊಸತನ್ನು ಸಮಾಜಕ್ಕೆ ಕೊಡಬೇಕು ಎಂದು ಪ್ರತಿಕ್ಷಣವೂ ಅವರು ಚಡಪಡಿಸುತ್ತಿದ್ದರು. ಅವರು ಸಾಧಿಸಿದ ಹೊಸತನವು ಕಮ್ಮಿಯದೇನೂ ಅಲ್ಲ. ಅವರ ಅದ್ಭುತ ಸಾಧನೆಗಳ ಅರಿವು ಹೆಚ್ಚಿನ ಜನಕ್ಕೆ ಇನ್ನೂ ಬಂದೇ ಇಲ್ಲ".

ಈ ಪತ್ರದಲ್ಲಿ ನಮೂದಿಸಿದ ಮಾತುಗಳು ಅಕ್ಷರಶಃ ಸತ್ಯ.

1995 ರಲ್ಲಿ ದ.ಕ. ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಶ್ರೀ ಪಾವಂಜೆ ಗುರುರಾಯರಿಗೆ ಮರಣೋತ್ತರವಾಗಿ ಸನ್ಮಾನಿಸಲಾಯಿತು. ಸನ್ಮಾನ ಪತ್ರದ ಪ್ರತಿಯನ್ನು ಅನುಬಂಧದಲ್ಲಿ ಕೊಡಲಾಗಿದೆ. ಅದನ್ನು ಅವರ ಕಿರಿಯ ಪುತ್ರರಾದ ಶ್ರೀ ಸೇತುಮಾಧವರಾಯರು ತಮ್ಮ ತಂದೆಯ ಪರವಾಗಿ ಸ್ವೀಕರಿಸಿದ್ದರು.

ಶ್ರೀ ಗುರುರಾಯರ ಮರಣೋತ್ತರದಲ್ಲೂ ಸಹ ಹೊಸ ಸಂಸ್ಕೃತ ಗ್ರಂಥಗಳ ಕನ್ನಡಾನುವಾದದ ಪ್ರಕಾಶನದ ಪ್ರಯತ್ನವು ಶ್ರೀಮನ್ಮಧ್ವಸಿದ್ಧಾಂತ–ಗ್ರಂಥಾಲಯದಿಂದ ನಡೆಯಿತು. 1956ರಲ್ಲಿ ಶ್ರೀಮನ್ಮಧ್ವಾಚಾರ್ಯರ 'ಕೃಷ್ಣಾಮೃತಮಹಾರ್ಣವ' ಎಂಬ ಗ್ರಂಥವು ಶ್ರೀಬನ್ನಂಜೆ ಗೋವಿಂದಾಚಾರ್ಯರ ಕನ್ನಡಾನುವಾದದೊಂದಿಗೆ ಪ್ರಕಾಶನಗೊಂಡಿತು. 1958ರಲ್ಲಿ ಶ್ರೀಮನ್ಮಧ್ವಾಚಾರ್ಯರ 'ತಂತ್ರಸಾರಸಂಗ್ರಹ' ಎಂಬ ಗ್ರಂಥವು ಶ್ರೀ ಬನ್ನಂಜೆ ಗೋವಿಂದಾಚಾರ್ಯರ ಕನ್ನಡಾನುವಾದದೊಂದಿಗೆ ಪ್ರಕಾಶನಗೊಂಡಿತು. ತದನಂತರ ಶ್ರೀಮನ್ಮಧ್ವಾಚಾರ್ಯರ 'ಋಗ್ಭಾಷ್ಯ'ವನ್ನು ಶ್ರೀ ಬನ್ನಂಜೆಯವರ ಕನ್ನಡಾನುವಾದದೊಂದಿಗೆ ಪ್ರಕಾಶನದ ಯೋಜನೆಯು ಇತ್ತು. ಆದರೆ ಆರ್ಥಿಕ ಕಾರಣದಿಂದಾಗಿ ಅದನ್ನು ಕೈಬಿಡಲಾಯಿತು.

ಅವರು ತೀರಿಕೊಂಡ ಮೇಲೆ ಅವರನ್ನು ಕಳೆದುಕೊಂಡವರು ತಮ್ಮ ನಷ್ಟವನ್ನು ಅನುಭವಿಸಿ ಶೋಕ ವ್ಯಕ್ತಪಡಿಸಿದರು. ಸಂತಾಪಸೂಚಕ ಸಭೆಗಳು ನಡೆದವು. ಅವರಿಂದ ಉಪಕೃತರಾದವರು ತಾವು ಅನಾಥರಾದಂತೆ ತಿಳಿದರು.

ಉಡುಪಿಯ ಶ್ರೀಪುತ್ತಿಗೆ ಮಠಾಧೀಶರಾದ, ಶತಾಯುಷಿ ತಪಸ್ವಿಗಳೆಂದು ಕೀರ್ತಿ ಪಡೆದ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು – "ಗುರುರಾಯರು ಸಮಾಜಕ್ಕೆ ಮಹತ್ತರವಾದ ಉಪಕಾರ ಮಾಡಿರುತ್ತಾರೆ. ಅವರು ನಿತ್ಯನೈಮಿತ್ತಿಕಾನುಷ್ಠಾನಗಳ ಕುರಿತಾದ ಪುಸ್ತಕಗಳನ್ನು ಪ್ರಕಟಿಸಿರುವುದರಿಂದ ಇಂದಿನ ಯುವಪೀಳಿಗೆಗೆ ಮಂತ್ರಜಪಗಳನ್ನು ಕಲಿಯಲು ಪ್ರೋತ್ಸಾಹ ಸಿಕ್ಕಿದಂತೆ ಆಗಿ ಅವರ ಧರ್ಮಾಚರಣೆಗೆ ಮಾರ್ಗದರ್ಶನ ಮಾಡಿಕೊಟ್ಟಿರುತ್ತಾರೆ. ಈ ಪುಸ್ತಕ ಪ್ರಕಾಶವಾಗದಿದ್ದಲ್ಲಿ ಜಪ ಪೂಜಾಕ್ರಮ ವಿಧಿಗಳು ಮೂಲೆಪಾಲಾಗುತ್ತಿದ್ದವು" ಎಂದು ರಾಯರ ಮಹಾಕಾರ್ಯವನ್ನು ಮುಕ್ತಕಂಠದಿಂದ ಸ್ಮರಿಸಿದ್ದಾರೆ.

ಹಳೆಯ ಮೈಸೂರಿನ ನಿಟ್ಟೂರು ಶ್ರೀನಿವಾಸರಾಯರು ಮುಂದೆ ಕರ್ನಾಟಕದ ಶ್ರೇಷ್ಠ ನ್ಯಾಯಾಧೀಶರೂ ಕೊಂಚ ಕಾಲ ರಾಜ್ಯಪಾಲರೂ ಆಗಿದ್ದರು. ಅವರು ಹೀಗೆ ಬರೆಯುತ್ತಾರೆ –

"ಪಾವಂಜೆ ಗುರುರಾಯರು ನಮ್ಮ ಸಮಾಜದಲ್ಲಿ ಆದರ್ಶಪ್ರಾಯರಾಗಿ ಮೆರೆದವರು. ಅವರು ಮಾಡಿದಂತಹ ಕಾರ್ಯಗಳು ಅಮೋಘವಾಗಿವೆ. ನನಗೆ ಅವರ ಮೇಲೆ ಸಂಪೂರ್ಣ ಪೂಜ್ಯಭಾವವಿದೆ. ಅವರು ನಮಗೆಲ್ಲ ಪ್ರಾತಃಸ್ಮರಣೀಯರು".

ಪಂಡಿತ ಪಂಢರಿನಾಥಾಚಾರ್ಯ ಗಲಗಲಿಯವರು ತಮ್ಮ ಮೇರುಕೃತಿ "ಮಾಧ್ವ ವಾಙ್ಮಯ ತಪಸ್ವಿಗಳು"ಯಲ್ಲಿ ಶ್ರೀ ಪಾವಂಜೆ ಗುರುರಾಯರ ಬಗ್ಗೆ ಬರೆಯುತ್ತಾರೆ –

"ದಾಸಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಕೆಲವೇ ಮಹನೀಯರಲ್ಲಿ ಉಡುಪಿಯ ದಿ॥ ಪಾವಂಜೆ ಗುರುರಾಯರು ಒಬ್ಬರಾಗಿದ್ದಾರೆ. ಗುರುರಾಯರು ಲೌಕಿಕ ವಿದ್ಯೆಯಾದ ಇಂಗ್ಲಿಷಿನ ಜೊತೆಗೆ ದೈವಭಕ್ತಿ, ವೈಷ್ಣವ ದೀಕ್ಷೆ, ಶಾಸ್ತ್ರಗಳಲ್ಲಿ ಆದರ ಮುಂತಾದವುಗಳನ್ನು ಬೆಳೆಸಿಕೊಂಡರು.

ಆ ಕಾಲದಲ್ಲಿ ವಿದ್ಯಾರ್ಥಿಗಳಿಗೆ ಸಂಧ್ಯಾವಂದನಾದಿ ಸಂಸ್ಕೃತ ಅಭ್ಯಾಸ

ಮಾಡಲಿಕ್ಕೆ ಒಂದು ಪಾಠ ಶಾಲೆಯನ್ನು ಪ್ರಾರಂಭಿಸಿದರು. ಮಾಧ್ವ ಜನತೆಗೆ ಉಪಯೋಗವಾಗಲೆಂದು ಸಂಧ್ಯಾವಂದನೆ, ಮಂತ್ರ, ಸ್ತೋತ್ರಗಳ ಚಿಕ್ಕ-ಚಿಕ್ಕ ಪುಸ್ತಕಗಳನ್ನು ಕನ್ನಡ ಲಿಪಿಯಲ್ಲಿ ಅಚ್ಚು ಹಾಕಿಸಿ ತಮಗೆ ಹಾನಿಯಾದರೂ ಕೂಡ ಅಲ್ಪ ಬೆಲೆಯಲ್ಲಿ ಮಾರಾಟ ಮಾಡತೊಡಗಿದರು.

ಕೆಲವು ಕಾಲ ಗೌರವ ಉಪಾಧ್ಯಾಯರಾಗಿ ಉಡುಪಿ ಮಧ್ವ ಸಿದ್ಧಾಂತ ಪ್ರಬೋಧಿನಿ ಪಾಠ ಶಾಲೆಯಲ್ಲಿ ದುಡಿದರು. 1908ನೇ ಇಸ್ವಿಯಲ್ಲಿ ಮಧ್ವಸಿದ್ಧಾಂತ ಗ್ರಂಥಾಲಯ ಎಂಬ ಸಂಸ್ಥೆಯನ್ನೂ, ಶ್ರೀಕೃಷ್ಣ ಮುದ್ರಣಾಲಯವನ್ನೂ 1919ನೇ ಇಸ್ವಿಯಲ್ಲಿಯೂ ಸ್ಥಾಪಿಸಿದರು. ಮಾಧ್ವರಲ್ಲಿ ದುರ್ಮಿಳವಾದ ಅನೇಕ ಗ್ರಂಥಗಳನ್ನು ಪಂಡಿತರಿಂದ ಸಂಶೋಧಿಸಿ, ಪರಿಷ್ಕರಿಸಿ ಅಚ್ಚು ಹಾಕಿಸಿದರು.

ಇವರು ಮಾಡಿದ ಮಹಾ ಕಾರ್ಯವೆಂದರೆ – ಪುರಂದರದಾಸ, ಕನಕದಾಸ ಮುಂತಾದವರ ಕೀರ್ತನೆಗಳನ್ನು ಕಷ್ಟಪಟ್ಟು ಸಂಗ್ರಹಿಸಿ, ಸಂಶೋಧಿಸಿ, ಶುದ್ಧಪಾಠದೊಂದಿಗೆ ಮುದ್ರಿಸಿ ಪ್ರಕಟಿಸಿದ್ದು ಸಾವಿರಾರು ದಾಸರ ಪದಗಳನ್ನು ಭಾಗ-ಭಾಗವಾಗಿ ಪ್ರಕಟಿಸಿ ಮಹೋಪಕಾರಮಾಡಿದ್ದಾರೆ. ಇದರಲ್ಲಿ ಇವರೇ ಮೊದಲಿಗರೆಂದು ಹೇಳಬಹುದು".

* * *

## ಡಾ॥ ಬನ್ನಂಜೆ ಗೋವಿಂದಾಚಾರ್ಯರು ಕಂಡಂತೆ ಶ್ರೀ ಪಾವಂಜೆ ಗುರುರಾಯರು

## ಇತಿಹಾಸ ಪುರುಷ : ದಿ॥ ಪಾವಂಜೆ ಗುರುರಾಯರು

ಕ್ರಿ.ಶ. 20ನೇ ಶತಮಾನದ ಐದನೆಯ ದಶಕ. ಆಗ ನಾನಿನ್ನೂ ಪೌಗಂಡ ದಾಟಿದ ಪಡ್ಡೆ ಹುಡುಗ. ಉಡುಪಿಯ ಅದಮಾರು ಮಠದ ಓಣಿಯಲ್ಲಿದ್ದ "ಮಠದ ಮನೆ"ಯಲ್ಲಿ ನಮ್ಮ ವಾಸ್ತವ್ಯ. ಅದಮಾರುಮಠದಲ್ಲಿ (ಈಗ ದಿವಂಗತ) ಕೊಡಂಗಳ ಅನಂತರಾಮಣ್ಣನ ಬಳಿ ಶ್ರೀಮಧ್ವವಿಜಯ ಪಾಠ. ಸಣ್ಣ ಪಂಚೆ (ಉಡುಪಿಯ ಬೈರಾಸ = ಬಹಿರ್ವಾಸ) ಉಟ್ಟುಕೊಂಡು, ದೊಗಲೆ ಧೋತಿಯನ್ನು ಬ್ರಹ್ಮವಸ್ತ್ರದಂತೆ ಉಪವೀತಾಕಾರವಾಗಿ ಕೊರಳಿಗೆ ಸುತ್ತಿಕೊಂಡು ರಥಬೀದಿಯಲ್ಲಿ ಓಡಾಡುತ್ತಿದ್ದ ಕಾಲ. ಆಗ ರಥಬೀದಿಯಲ್ಲಿ ನನ್ನನ್ನು ಆಕರ್ಷಿಸುತ್ತಿದ್ದ ದೃಶ್ಯವಿದು ಪೇಜಾವರಮಠದ ಪಕ್ಕದಲ್ಲಿ, ಇಡೀ ಉಡುಪಿಯಲ್ಲೇ ಅಪೂರ್ವವಾದ ಒಂದು ಪುಸ್ತಕದ ಅಂಗಡಿ. ಅಂಗಡಿಯ ಎದುರು ಎದ್ದುಕಾಣುವ ದೊಡ್ಡ ಫಲಕ: ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ. ಒಳಗೆ ಬೀರುಗಳಲ್ಲಿ ಸುಂದರವಾಗಿ, ನೀಟಾಗಿ ಜೋಡಿಸಿಟ್ಟ ಜಪದ, ಪೂಜೆಯ, ಪೌರೋಹಿತ್ಯದ, ವಾರ್ಷಿಕ ವಿಶೇಷದಿನಗಳ ಆಚರಣೆಯ ಪುಸ್ತಕಗಳು. ಮುದ್ರಣದೋಷಗಳಿಲ್ಲದ, ಮುದ್ದಾಗಿ ಮುದ್ರಣಗೊಂಡ ಪುಸ್ತಕಗಳು. ಕರ್ನಾಟಕದುದ್ದಗಲಕ್ಕು ಹೆಸರುವಾಸಿಯಾದ ಪ್ರಕಾಶನಗಳು.

ಇನ್ನೊಂದು ಬದಿಯಲ್ಲಿ ದಾಸರ ಕೀರ್ತನೆಗಳು; ಯಕ್ಷಗಾನದ ಪ್ರಸಂಗಗಳು, ಎಲ್ಲೆಡೆಯು ಶಿಸ್ತು ಒಪ್ಪ–ಓರಣ ಎದ್ದುಕಾಣುವಂತಿತ್ತು.

ಅಂಗಡಿಯ ಎದುರುಗಡೆ, ರಥಬೀದಿಗೆ ತಾಗಿ ಜಗಲಿಯಲ್ಲಿ ಒಂದು ಮೆತ್ತೆಯ ಆಸನ. ಒರಗಲಿಕ್ಕೊಂದು ಆಸರೆಯಾಗಿ ತಲೆಗಿಂಬು. ಬಿಳಿಯ ಮೆತ್ತೆ; ಬಿಳಿಬಿಳೀ ತಲೆಗಿಂಬು, ಅದರಲ್ಲಿ ಒಬ್ಬರು ಎಪ್ಪತ್ತರ ಹರಯದ ಬೆಳ್ಳನೆಯ ತೇಜಸ್ವಿಮೂರ್ತಿ. ಉಟ್ಟದ್ದು ಬೆಳ್ಳನೆಯ ಗರಿಗರೀ ಧೋತಿ. ತೊಟ್ಟದ್ದು ಬೆಳ್ಳನೆಯ ಗರಿಗರೀ ಜುಬ್ಬ. "ಸರ್ವಶುಕ್ಲಾ ಸರಸ್ವತೀ" ಎನ್ನುವಂತೆ ಗೌರವ ಬರಿಸುವ ನೋಟ.

ಈ ಬಿಳಿಯ ಸಾಮ್ರಾಜ್ಯದಲ್ಲಿ, ಹಣೆಯ ಮೇಲೆ ಎದ್ದುಕಾಣುವ ಢಾಳಾದ ಅಂಗಾರಕ, ಅಕ್ಷತ ಮಾತ್ರ ಕಪ್ಪಾಗಿ ಕಂಗೊಳಿಸುತ್ತಿತ್ತು; ಬೆಳ್ಳಗಿನ ಚಂದ್ರಮಂಡಲದಲ್ಲಿ

ಮೊಲದ ಕಪ್ಪಿನಂತೆ! ಗಾಂಭೀರ್ಯದ ಜತೆಗೆಯೆ ನಸುನಗುವಿನಿಂದ ಕಳೆಗೊಂಡ ಮುಖ. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕು ಎನ್ನಿಸುವ ಭವ್ಯವಾದ ವ್ಯಕ್ತಿತ್ವ. ಹತ್ತಿರ–ಹತ್ತಿರ ಆರಡಿಯ ಆಜಾನುಬಾಹು. ಇವರೇ ಆ ಗ್ರಂಥಾಲಯದ ಸ್ಥಾಪಕರು ಮತ್ತು ಮಾಲಕರು. ಕರ್ಣಾಟಕದ ಆದ್ಯಂತ ಹೆಸರುವಾಸಿಯಾದ, ಉಡುಪಿಯ ಏಕೈಕ ಗ್ರಂಥಾಲಯದ ರೂವಾರಿ ಪಾವಂಜೆ ಗುರುರಾಯರು ಎಂದು ನನಗೆ ಮತ್ತೆ ತಿಳಿಯಿತು.

* * *

ಹೇಳುವುದನ್ನು ಕೇಳಿದ್ದೇನೆ : ಅವರು ಹುಟ್ಟಿದ್ದು ಗಾಂಧೀಜಿ ಹುಟ್ಟಿದ ವರ್ಷ ಕ್ರಿ.ಶ. 1869ರಲ್ಲಿ. ಅವರು ದೇಹತ್ಯಾಗ ಮಾಡಿದ್ದು ಗಾಂಧೀಜಿ ದೇಹತ್ಯಾಗ ಮಾಡಿದ ವರ್ಷವೆ 1948ರಲ್ಲಿ ಎಂದು.

ಇದೊಂದು ರೋಚಕ ಸಂಗತಿಯೇನೋ ಹೌದು. ಇದು ಕೇವಲ ಕಾಕತಾಳೀಯ ಇರಬಹುದು. ಅದರ ಹಿಂದೆ ಯಾವುದೋ ಅದೃಷ್ಟದ ಆಟವೂ ಇರಬಹುದು. ವಿಶ್ವದ ಪ್ರತಿಯೊಂದು ಘಟನೆಯೂ ಗಣಿತಬದ್ಧವಾಗಿದೆಯಲ್ಲವೇ?

ಆದರೆ ನನಗೆ ಕಾಣುವ ಸಂಗತಿಯೆ ಬೇರೆ : ಮಧ್ವಸಿದ್ಧಾಂತ ಸಂಪ್ರದಾಯಗಳನ್ನು, ಪ್ರಮೇಯಗಳನ್ನು, ಆಚಾರವಿಚಾರಗಳನ್ನು ಪರಿಚಯಿಸುವ ಪುಸ್ತಕಗಳನ್ನು, ಪ್ರಕಟಿಸಿ ಜನಕ್ಕೆ ಮುಟ್ಟಿಸುವ ದೀಕ್ಷೆ ತೊಟ್ಟು ಬಾಳಿದ ಈ ಪುಣ್ಯಾತ್ಮ ಈ ನೆಲದಲ್ಲಿ ಬದುಕಿದ್ದ ಕಾಲ 79 ವರ್ಷಗಳು. ಆಚಾರ್ಯಮಧ್ವರು ಈ ನೆಲದಲ್ಲಿ ಎಲ್ಲರ ಕಣ್ಣಿಗೆ ಕಾಣಿಸಿಕೊಂಡು ಓಡಾಡಿದ ಕಾಲ ಕೂಡ 79 ವರ್ಷಗಳು.

ಇದೂ ಕಾಕತಾಳೀಯ ಇರಬಹುದು. ಆದರೂ ರೋಚಕವಾದ ಕಾಕತಾಳೀಯ. ಈ 79ರ ಹಿಂದೆ, (7+9=16; 6+1=7) ಕೂಡಿಸಿದರೆ ಬರುವ ರಾಮಾಯಣದ ಸಂಖ್ಯೆಯಾದ ಮತ್ತು ಏಳು ವಿದ್ಯೆಗಳನ್ನು (ನಾಕು ವೇದಗಳು, ರಾಮಾಯಣ–ಭಾರತಗಳೆಂಬ ಇತಿಹಾಸ, 18 ಪುರಾಣಗಳು ಮತ್ತು ಪಂಚರಾತ್ರ) ಪ್ರತಿನಿಧಿಸುವ 7ರ ಹಿಂದೆ ಯಾವುದೋ ಒಂದು ಅಧ್ಯಾತ್ಮದ ನಂಟು ಇರಬೇಕು ಎಂದು ನನ್ನ ಅನಿಸಿಕೆ.

ಹೌದು; ದಿ॥ ಪಾವಂಜೆಯವರು ಬಾಹ್ಯ ಜೀವನದಲ್ಲಿ

ಗಾಂಧಿವಾದಿಯಾಗಿದ್ದರು. ಅಂತರಂಗ–ಜೀವನದಲ್ಲಿ ಮಧ್ವಸಿದ್ಧಾಂತದ ಅಪ್ಪಟ ಅನುಯಾಯಿಯಾಗಿದ್ದರು. ಅದರ ಸಮನ್ವಯವೆ ಅವರು ತೊಡುತ್ತಿದ್ದ ಬೆಳ್ಳಗಿನ ಖಾದಿ ಉಡುಪು ಮತ್ತು ಹಣೆಯಲ್ಲಿ ಊರ್ಧ್ವಪುಂಡ್ರದ ನಡುವೆ ಲಕ್ಷಣವಾಗಿ ಕಾಣಿಸುತ್ತಿದ್ದ ಅಂಗಾರಕ ಅಕ್ಷತೆ.

* * *

ನಾನು ಚಿಕ್ಕಂದಿನಲ್ಲಿ ಇವರ ಬಗ್ಗೆ ಕೆಲವು ಕಥೆಗಳನ್ನು ಕೇಳಿದ್ದೆ. ಅದರಲ್ಲಿ ಒಂದು ಇವರು ಜಪ–ಪೂಜೆ–ಹೋಮಗಳ ವಿಧಿವಿಧಾನಗಳನ್ನು ವಿವರಿಸುವ ಮಂತ್ರದ ಪುಸ್ತಕಗಳನ್ನು ಪ್ರಕಟಿಸಿದಾಗ ಸಂಪ್ರದಾಯವಾದಿ ಮಡಿವಂತ ಪಂಡಿತರಿಂದ ಮತ್ತು ಕೆಲವು ಮಠಾಧೀಶರಿಂದ ವಿರೋಧ ಪ್ರಕಟವಾಗಿತ್ತಂತೆ. ಪಾವಂಜೆಯವರಿಗೆ ಬಹಿಷ್ಕಾರ ಹಾಕುವವರೆಗೂ ಇದು ಮುಂದುವರಿದಿತ್ತಂತೆ!

ಹೌದು; ಮಡಿಯಾದ ತಾಳೆಗರಿಯಲ್ಲಿ ಮಾತ್ರ ಹುದುಗಿದ್ದ, ಪುರೋಹಿತರು ಮತ್ತು ಗೆದ್ದಲುಗಳು ಮಾತ್ರ ಮುಟ್ಟಬಹುದಾಗಿದ್ದ ವೇದಮಂತ್ರಗಳನ್ನು ಪ್ರಿಂಟ್ ಮಾಡಿ ಮೈಲಿಗೆಯವರಿಗೂ ದೊರಕುವಂತೆ ಮಾಡಿದ್ದು ಮಹಾಪರಾಧವಲ್ಲವೇ?

ಅವರ ಬಗೆಗೆ ನಾನು ಕೇಳಿದ ಇನ್ನೊಂದು ಸಂಗತಿ: ಅವರ ಮಗಳು ಜಾನಕಿಬಾಯಿ ಹೆಣ್ಣಮಕ್ಕಳಿಗೆ ಸಂಸ್ಕೃತ ಹೇಳಿಕೊಡಲು ಮನೆಯಲ್ಲೆ ಶಾಲೆಯೊಂದನ್ನು ಪ್ರಾರಂಭಿಸಿದ್ದರಂತೆ. ದಿ॥ ಪಾವಂಜೆ ಗುರುರಾಯರು ಮಗಳ ಈ ಧೀರನಿರ್ಧಾರದ ದಿಟ್ಟ ಹೆಜ್ಜೆಗೆ ಬೆನ್ನೆಲುಬಾಗಿ ನಿಂತರು. ಇದೂ ಮಡಿವಂತರಿಗೆ ಸಹನೆಯಾಗಲಿಲ್ಲ. ಹೆಣ್ಮಕ್ಕಳ ಬಾಯಲ್ಲಿ ಸಂಸ್ಕೃತದ ಶ್ಲೋಕಗಳು ಉಚ್ಚಾರಗೊಂಡರೆ ದೇವಭಾಷೆ ಮೈಲಿಗೆಯಾಗುವುದಿಲ್ಲವೇ? ಎಲ್ಲಿಯಾದರೂ ಉಂಟಾ? ಹೆಂಗಸರ ಬಾಯಲ್ಲಿ ಓಂಕಾರ ಬರುವುದೆಂದರೆ ಕಲಿಯ ಮಹಿಮೆಯೆ ಸರಿ. ಹೀಗೆ ತಿರುಗಿಬಿದ್ದ ಮಡಿವಂತ ಪಂಡಿತರ ತಂಡ ಪಾವಂಜೆಯವರನ್ನು ಉಗ್ರವಾಗಿ ವಿರೋಧಿಸಿತಂತೆ!

ಪಾವಂಜೆಯವರು ಯಾವುದಕ್ಕೂ ಜಗ್ಗಲಿಲ್ಲ. ಸರಿ–ತಪ್ಪುಗಳ ನಿಚ್ಚಳವಾದ ಅರಿವು ಅವರಿಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಈ ಧಾರ್ಮಿಕ ಸಂಸ್ಕೃತಿ ಭವಿಷ್ಯತ್ತಿನಲ್ಲಿ ಉಳಿದು ಮುಂದುವರಿಯಬೇಕು ಎನ್ನುವ ದೂರದೃಷ್ಟಿಯ ಕಾಳಜಿ ಅವರಿಗಿತ್ತು.

ಎಲ್ಲಿ ಮಡಿವಂತರು ಕುರುಡರಾದರೋ ಅಲ್ಲಿ ಅವರು ಕಣ್ಣುತೆರೆದರು. ಧೃತರಾಷ್ಟ್ರನ ರಾಜ್ಯದಲ್ಲಿ ಅವರು ಭೀಷ್ಮರಾದರು. ಪರಿಣಾಮವಾಗಿ ಅವರು ತನ್ನ ಈ ಕ್ರಾಂತಿಕಾರಿ ನಿರ್ಧಾರದಲ್ಲಿ ಕಲ್ಲುಬಂಡೆಯಂತೆ ಅಚಲವಾಗಿ ನಿಂತರು. ಕ್ರಮೇಣ ವಿರೋಧಿಗಳ ಸದ್ದು ಕ್ಷೀಣವಾಯಿತು. ಅಲ್ಲದೆ, ಈ ವಿರೋಧಗಳ ನಡುವೆಯೂ ಶತಾಯುಷಿಗಳಾಗಿದ್ದ, ಶ್ರೀಪುತ್ತಿಗೆ ಮಠದ ಶ್ರೀ ಸುಧೀಂದ್ರತೀರ್ಥ ಶ್ರೀಪಾದರು, ಮೇರು ವ್ಯಕ್ತಿತ್ವದ ಮಹಾನ್ ಯತಿ – ಅದಮಾರುಮಠದ ಶ್ರೀವಿಭುದಪ್ರಿಯತೀರ್ಥ ಶ್ರೀಪಾದರು ಇಬ್ಬರೂ ಉಡುಪಿಯ ದೀಪಸ್ತಂಭಗಳು ಮತ್ತು ಮಹಾತಪಸ್ವಿಗಳು. ಇಂತಹ ಯತಿವರೇಣ್ಯರ ಬೆಂಬಲ ಪಾವಂಜೆಯವರಿಗೆ ಶ್ರೀರಕ್ಷೆಯಾಯಿತು. ವಿರೋಧದ ಸದ್ದಡಗಿತು. ವಿರೋಧಿಸಿದವರು ಬಾಲ ಮಡಚಿ ತೆಪ್ಪಗಾದರು!

ಒಂದು ವೇಳೆ, ದಿ॥ ಪಾವಂಜೆಯವರು ಈ ಸಂಪ್ರದಾಯವಾದಿಗಳಿಗೆ ಹೆದರಿ, ಅವರ ವಾದಕ್ಕೆ ಮಣಿದು, ಮಂತ್ರದ ಪುಸ್ತಕಗಳನ್ನು ಪ್ರಕಟಿಸುವ ನಿರ್ಧಾರವನ್ನು ಕೈಬಿಟ್ಟಿದ್ದರೆ, ಪ್ರಾಯಃ ಸಂಪ್ರದಾಯವಾದಿಗಳ ಮಕ್ಕಳು–ಮೊಮ್ಮಕ್ಕಳೇ ಇಂದು ಜಪ–ಪೂಜೆ ಮಾಡುವುದು ಸಾಧ್ಯವಾಗುತ್ತಿರಲಿಲ್ಲ. ತಾಡವಾಲೆಯ ತುಳುಲಿಪಿ ಮರೆತುಹೋಯಿತು. ಬೇರೆ ಪುಸ್ತಕ ಇಲ್ಲ. ಹೀಗಾಗಿ ಎಲ್ಲ ವೈದಿಕಾಚಾರಗಳೂ ಮೂಲೆಪಾಲಾಗುತ್ತಿದ್ದುವು. ಈ ಸಂಪ್ರದಾಯಗಳ ಸಾಂಸ್ಕೃತಿಕ ಪರಂಪರೆಯನ್ನು ಮುಂದಿನ ತಲೆಮಾರಿಗೆ ಕೊಟ್ಟು ಉಳಿಸಿದ ಕೀರ್ತಿ ಪೂರ್ತಿಯಾಗಿ ಪಾವಂಜೆಯವರಿಗೆ ಸಲ್ಲಬೇಕು. ಈ ನಿಟ್ಟಿನಲ್ಲಿ ಧಾರ್ಮಿಕ ಪರಂಪರೆ ದಿ॥ ಪಾವಂಜೆಯವರಿಗೆ ಎಂದೆಂದೂ ಋಣಿಯಾಗಿರಬೇಕು.

* * *

ಪಾವಂಜೆಯವರ ಕೊಡುಗೆ ಇಲ್ಲಿಗೇ ಮುಗಿಯಲಿಲ್ಲ. ಬರಿಯ ಹೆಣ್ಮಕ್ಕಳ ಬಾಯಲ್ಲಷ್ಟೆ ಉಳಿದಿದ್ದ ಅನೇಕ ದಾಸರ ಹಾಡುಗಳನ್ನು ಸಂಗ್ರಹಿಸಿ ಸಂಪುಟಗಳಲ್ಲಿ ಪ್ರಕಟಿಸಿದ ಮೊದಲ ಕೀರ್ತಿ ಅವರಿಗೆ ಸಲ್ಲಬೇಕು. ಈಗ ದಾಸಸಾಹಿತ್ಯದ ಬಗೆಗೆ ಸಾಕಷ್ಟು ಕೆಲಸಗಳು ನಡೆಯುತ್ತಿವೆ. ಸಂಶೋಧನೆಗಳು–ಕೀರ್ತನೆಯ ಸಂಪುಟಗಳು ಹೊರಬರುತ್ತಿವೆ. ಆದರೆ ಇವೆಲ್ಲಕ್ಕೆ ಪಂಚಾಂಗ ಹಾಕಿಕೊಟ್ಟವರು ಪಾವಂಜೆಯವರು. ಅವರು ಬಿತ್ತಿದ ಬೀಜ ಈಗ ಹೆಮ್ಮರವಾಗಿ ಬೆಳೆಯುತ್ತಿದೆ. ಪಾವಂಜೆಯವರನ್ನು ಮರೆತು ದಾಸಸಾಹಿತ್ಯವನ್ನು ಚಿಂತಿಸುವುದೇ ಸಾಧ್ಯವಿಲ್ಲ.

ದಾಸಸಾಹಿತ್ಯಕ್ಕೆ ಅವರ ಕೊಡುಗೆ ಅನನ್ಯವಾದದ್ದು.

ನೂರಾರು ಯಕ್ಷಗಾನ ಪ್ರಸಂಗವನ್ನು ಮೊದಲು ಪ್ರಕಟಿಸಿದ ಕೀರ್ತಿಯೂ ಪಾವಂಜೆಯವರಿಗೇ ಸಲ್ಲಬೇಕು. ಅವರ ಕನಸೂ ದೊಡ್ಡದು. ಅವರ ಸಾಧನೆಯೂ ದೊಡ್ಡದು. ಹಾಗೆಯೆ ಅವರ ಸಿದ್ಧಿಯೂ ದೊಡ್ಡದು. ಪುಸ್ತಕ ಪ್ರಕಾಶನ–ಮಾರಾಟ ಕೈಸುಟ್ಟುಕೊಳ್ಳುವ ಕೆಲಸ ಎಂದಿದ್ದ ಕಾಲದಲ್ಲಿ ಅವರು ಸ್ವಂತ ಮುದ್ರಣಾಲಯವನ್ನು ಸ್ಥಾಪಿಸಿ ತಾನೇ ಪುಸ್ತಕಗಳನ್ನು ಮುದ್ರಿಸಿ ಪ್ರಕಟಿಸಿದರು. "ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ" ಎಂಬ ಹೆಸರಿನಲ್ಲಿ ಅಂಗಡಿಯನ್ನು ತೆರೆದು ತನ್ನ ಪ್ರಕಾಶನಗಳ ಮಾರಾಟದ ವ್ಯವಸ್ಥೆ ಮಾಡಿದರು. ಕರ್ನಾಟಕದಾದ್ಯಂತ ಇವರ ಗ್ರಾಹಕರು. ಹೀಗೆ ಇವರಿಂದ ಈ ಉದ್ದಿಮೆ ಎತ್ತರಕ್ಕೇರಿತು. ಉದ್ದಿಮೆಯಿಂದ ಇವರು ಎತ್ತರಕ್ಕೇರಿದರು.

ದಿ। ಪಾವಂಜೆಯವರಲ್ಲಿದ್ದ ಕರ್ತೃತ್ವಶಕ್ತಿ, ಆತ್ಮಬಲ ಮತ್ತು ಛಲ ಇದಕ್ಕೆ ಕಾರಣ. ಅಸಾಧ್ಯವಾದದ್ದನ್ನು ಸಾಧಿಸಿ ತೋರಿಸುವ ಧೈರ್ಯ–ಸಾಹಸಗಳು ಅವರ ವ್ಯಕ್ತಿತ್ವದ ಭಾಗವಾಗಿದ್ದವು. ತಾವು ನಂಬಿದ ಸಂಪ್ರದಾಯದ ಚೌಕಟ್ಟಿನಲ್ಲೆ ಅವರು ಏರಿದ ಎತ್ತರ ವಿಸ್ಮಯ ಬರಿಸುವಂತಹದು.

ಪ್ಯಾಂಟು ತೊಟ್ಟವರಲ್ಲ. ಬೂಟು ಕಾಲಿಗೇರಿಸಿದವರಲ್ಲ. ಆದರೆ ಪ್ಯಾಂಟು–ಬೂಟು ತೊಟ್ಟು ತಾವು ನಾಗರಿಕರೆಂದು ಭ್ರಮಿಸಿದವರು ಪಾವಂಜೆಯವರ ಎತ್ತರವನ್ನು ಕಂಡು ಮೂಗಿಗೆ ಬೆರಳೇರಿಸಿದರು.

* * *

ನನ್ನ ಹದಿಹರೆಯದಲ್ಲೆ ಪಾವಂಜೆ ಗುರುರಾಯರು ತೀರಿಕೊಂಡರು. ಆದರೆ ಅವರು ಪ್ರಕಟಿಸಿದ ಅನುಷ್ಠಾನ ಗ್ರಂಥಗಳು ನನಗೆ ಹುಚ್ಚು ಹಿಡಿಸಿದ್ದವು. ಆಚಾರಸಂಹಿತೆಗೆ ಅವರು ಪ್ರಕಟಿಸಿದ "ಆಹ್ನಿಕಮಂಜರಿ" ಒಂದು ಅದ್ಭುತ ಕೊಡುಗೆ. ಅಂಥ ಒಂದು ಗ್ರಂಥ ಹಿಂದಾಗಲಿಲ್ಲ; ಮುಂದಾಗುವ ಸಂಭವವಿಲ್ಲ.

ಅದರಲ್ಲಿ ಏನಿದೆ? ಏನಿಲ್ಲ? ಮುಂಜಾನೆಯಿಂದ ಸಂಜೆಯ ತನಕದ ಎಲ್ಲ ಅನುಷ್ಠಾನಗಳೂ, ಎಲ್ಲ ಮಂತ್ರಗಳೂ, ಎಲ್ಲ ಸ್ತೋತ್ರಗಳೂ ಅದರಲ್ಲಿವೆ. ಅದರಲ್ಲಿ ಮತ್ತೆ ಎರಡು ಸಂಪುಟ: ಋಗ್ವೇದೀಯ ಆಹ್ನಿಕಮಂಜರಿ ಮತ್ತು ಯಜುರ್ವೇದೀಯ ಆಹ್ನಿಕಮಂಜರಿ. ಪ್ರಕಾಶನದ ಪರ್ಫೆಕ್ಷನ್ನಿಗೆ, ಪರಿಪೂರ್ಣತೆಗೆ

ಇನ್ನೊಂದು ಹೆಸರು ಪಾವಂಜೆಯವರು. ನಮ್ಮ ಪುರೋಹಿತರು ತಾವು ಕಲಿತ ಮಂತ್ರದ ತಪ್ಪುಗಳನ್ನು ಅವರ ಪುಸ್ತಕ ನೋಡಿ ತಿದ್ದಿಕೊಳ್ಳುತ್ತಿದ್ದರು!

ನಾನು ಬಾಲ್ಯದಲ್ಲಿ ಹೆಚ್ಚಿನ ಅನುಷ್ಠಾನದ ವಿಧಿಗಳನ್ನೂ, ಮಂತ್ರಗಳನ್ನೂ ಕಲಿತದ್ದೇ ಈ "ಆಹ್ನಿಕಮಂಜರಿ"ಯಿಂದ. ಬಾಲ್ಯದಲ್ಲಿ ನನ್ನನ್ನು ಸೆಳೆದ ಇನ್ನೊಂದು ಗ್ರಂಥ – "ವಾರ್ಷಿಕ ವಿಶೇಷ ಪೂಜಾವಿಧಿಗಳು". ವರ್ಷದ 12 ತಿಂಗಳುಗಳಲ್ಲಿ ಬರುವ ಎಲ್ಲ ಹಬ್ಬಹರಿದಿನಗಳ ವಿಧಿ–ವಿಧಾನಗಳು ಅದರಲ್ಲಿ ಬಂದಿವೆ. ಅಂತಹ ಇನ್ನೊಂದು ಪುಸ್ತಕ ಈ ತನಕವೂ ಬಂದಿಲ್ಲ. ಜತೆಗೆ ವಾರ್ಷಿಕ ಅನುಷ್ಠಾನಗಳನ್ನು ವಿವರವಾಗಿ ನಿರೂಪಿಸುವ ಪೂರಕಗ್ರಂಥಗಳು: ಕೃಷ್ಣಜಯಂತಿ, ಗಣೇಶಚತುರ್ಥಿ, ನಾಗಪಂಚಮಿ, ಅನಂತನಚತುರ್ದಶಿ, ತುಳಸೀಪೂಜೆ, ಪುಸ್ತಕ(ವ್ಯಾಸ)ಪೂಜೆ, ಶ್ರಾದ್ಧ, ಮಹಾಲಯ ಇವೆಲ್ಲಾ ವಿಧಿಗಳನ್ನು ವಿಸ್ತಾರವಾಗಿ ವಿವರಿಸುವ ಪ್ರತ್ಯೇಕ ಪುಸ್ತಕಗಳು. ಯಾರು ಮಾಡದ ಕೆಲಸವನ್ನು, ಪ್ರಾಯಃ ಯಾರೂ ಅನುಕರಿಸಲಾಗದ ಕಾರ್ಯವನ್ನು ಪಾವಂಜೆಯವರು ಮಾಡಿದರು!

ನಾನು ಬಾಲ್ಯದಲ್ಲಿ ಈ ಪುಸ್ತಕಗಳನ್ನಿಟ್ಟುಕೊಂಡೇ ಹಬ್ಬಹರಿದಿನಗಳಲ್ಲಿ ಪೂಜೆಗಳನ್ನು ಮಾಡುತ್ತಿದ್ದೆ. ಆಗ ನನ್ನಂಥ ಹದಿವರೆಯದ ಹುಡುಗರಿಗೆ ಅನುಷ್ಠಾನದ ದಿಸೆಯಲ್ಲಿ ಆ ಪುಸ್ತಕಗಳ ಕೊಡುಗೆ–ಪ್ರಭಾವ ಅಪಾರ. ಪ್ರಾಯಃ ಬಹಳ ಮಂದಿ ತರುಣರಿಗೆ ಅನುಷ್ಠಾನದಲ್ಲಿ ಆಸಕ್ತಿ ಮೂಡಿದ್ದೇ ಅವರ ಪುಸ್ತಕಗಳಿಂದ.

* * *

ಅವರ ಪುಸ್ತಕಗಳಿಗೆ ಬೆಲೆಯೂ ತುಂಬ ಕಡಿಮೆ: ಆ ಕಾಲದ ನಾಕಾಣೆ–ಎಂಟಾಣೆ. ನನಗೆ ಈ ಆಚಾರಕಾಂಡದ ಪುಸ್ತಕಗಳನೆಲ್ಲ ಕೊಂಡು ಮನೆಯಲ್ಲಿ ಸಂಗ್ರಹಿಸಿ ಇಡಬೇಕೆನ್ನುವ ಆಸೆ. ಆದರೆ ಅಪ್ಪನ ಬಳಿ ದುಡ್ಡು ಕೇಳಲು ಭಯ. ಆಗ ಅಪ್ಪ ದೇವರ ಕೋಣೆಯಲ್ಲಿ ಪೂಜೆ ಮಾಡುತ್ತಿದ್ದಾಗ ಅವರ ಡ್ರಾಯರ್ನಿಂದ ಮೆಲ್ಲನೆ ನಾಕಾಣೆ–ಎಂಟಾಣೆ ತೆಗೆದು ಈ ಪುಸ್ತಕಗಳನ್ನು ಕೊಂಡು ಸಂಗ್ರಹಿಸುತ್ತಿದ್ದೆ. ನನ್ನ ಬಾಲ್ಯದ ಈ ಕಳ್ಳತನಕ್ಕಾಗಿ ಈಗಲೂ ನನಗೆ ಹೆಮ್ಮೆಯಿದೆ. ಪಾವಂಜೆಯವರ ಪ್ರಕಾಶನದ ಪ್ರಭಾವ ಅಂಥದು!

* * *

ಮುಂದೆ ಅವರ ಇಬ್ಬರು ಮಕ್ಕಳು ಶ್ರೀಕೃಷ್ಣ ಮುದ್ರಣಾಲಯದ ಮಧ್ವಮುನಿರಾಯರು ಮತ್ತು ಮಧ್ವಸಿದ್ಧಾಂತಗ್ರಂಥಾಲಯದ ಸೇತುಮಾಧವ–ರಾಯರು (ಇಬ್ಬರೂ ಈಗ ಬದುಕಿಲ್ಲ) ನನಗೆ ಆತ್ಮೀಯರಾದರು. ನಾನು ಅನುವಾದಿಸಿಕೊಟ್ಟ, ಆಚಾರ್ಯಮಧ್ವರ ಸರ್ವಮೂಲದ ಕೆಲವು ಗ್ರಂಥಗಳನ್ನು (ತಂತ್ರಸಾರಸಂಗ್ರಹ, ಕೃಷ್ಣಾಮೃತಮಹಾರ್ಣವ, ಮಹಾಭಾರತತಾತ್ಪರ್ಯ ಇತ್ಯಾದಿ) ಅವರು ಪ್ರಕಟಿಸಿದ್ದರು. ಇದು ತುಂಬ ಜನಪ್ರಿಯವೂ ಆಯಿತು. ಆದರೆ ದುರ್ದೈವದಿಂದ ಈ ಯೋಜನೆ ಮುಂದುವರಿಯಲಿಲ್ಲ.

ಆ ಪುಣ್ಯಪುರುಷನ ಸಾಧನೆ ಉಡುಪಿಯ ಇತಿಹಾಸದಲ್ಲಿ ಒಂದು ಮರೆಯಲಾಗದ ಅಧ್ಯಾಯ. ಅವರಿಲ್ಲದ ಈ ಶೂನ್ಯವನ್ನು ತುಂಬುವವರಿಲ್ಲದೆ ಅಷ್ಟು ಮಟ್ಟಿಗೆ ಉಡುಪಿ ಬಡವಾಗಿದೆ.

* * *

(ಎಂ.ಜಿ.ಎಂ. ಕಾಲೇಜಿನ ಕನಕದಾಸ ಅಧ್ಯಯನ ಸಂಶೋಧನ ಪೀಠದ ವತಿಯಿಂದ 2015 ಇಸವಿಯಲ್ಲಿ ಪ್ರಕಾಶಿತ "ಕನಕದಾಸ ಕೀರ್ತನೆ" ಎಂಬ ಪುಸ್ತಕದ ಮುನ್ನುಡಿಯಾಗಿ ಡಾ॥ ಬನ್ನಂಜೆ ಗೋವಿಂದಾಚಾರ್ಯರು ಬರೆದ ಲೇಖನದ ಮುಖ್ಯಾಂಶವಿದು.)

## ಪಾವಂಜೆ ಗುರುರಾವ್ ಅಂಡ್ ಸನ್ಸ್

ಇವರಿಗೆ ಉಡುಪಿಯ

ಶ್ರೀ ಕನಕದಾಸ ಚತುರ್ಥ ಶತಮಾನೋತ್ಸವದ

ಶುಭಸಮಾರಂಭದಲ್ಲಿ ಅರ್ಪಿಸಿದ

# ಅಭಿನಂದನಾ ಪತ್ರ

ಮಾನಾರ್ಹರಾದ ಪಾವಂಜೆ ಸೋದರರೆ,

ನಿಮ್ಮ ತೀರ್ಥರೂಪರಾದ ಪಾವಂಜೆ ಗುರುರಾಯರು ಕನ್ನಡದ ಜನಕ್ಕೆ ಚಿರಪರಿಚಿತವಾದ ಹೆಸರು. ಸುಮಾರು ೬೦ ವರ್ಷಗಳ ಕೆಳಗೆ, ಇಪ್ಪತ್ತನೆಯ ಶತಮಾನದ ತರುಣದಲ್ಲಿ ಅವರು ಉಡುಪಿಗೆ ಬಂದು ನೇಸಿ ಮೊತ್ತಮೊದಲ ಬಾರಿಗೆ ಪೂಜಾ ಮತ್ತು ಸಂಧ್ಯಾವಂದನ ವಿಧಿಗಳನ್ನು ಕನ್ನಡಲಿಪಿಯಲ್ಲಿ ಅಚ್ಚು ಮಾಡಿಸಿದರು. ಪಾವಂಜೆಯಲ್ಲಿ ಹುಟ್ಟಿ, ತಿರುವಾಂಕೂರಿನಲ್ಲಿ ಕಲಿತು, ಆಯುರ್ವೇದಪಂಡಿತರಾಗಿ ಉಡುಪಿಯನ್ನು ಪ್ರವೇಶಿಸಿದ ಅವರು ಕನ್ನಡದ ಕ್ರಾಂತಿಕಾರಿ ಪ್ರಕಾಶಕರಲ್ಲಿ ಅಗ್ರಗಣ್ಯರು. ಮಂತ್ರಗ್ರಂಥಗಳನ್ನು ಅಚ್ಚಿನ ಮನೆಗೊಯ್ಯುವುದೇ ಮಹಾಪರಾಧ ಎಂದು ಭಾವಿಸಿದ್ದ ಕಾಲದಲ್ಲಿ ಅವರು ಸಮಾಜದ ಎಲ್ಲ ಪ್ರತಿಕ್ರಿಯೆಗಳನ್ನೂ ದಿಟ್ಟತನದಿಂದ ಸ್ವಾಗತಿಸಿ ತನ್ನ ಪ್ರಕಾಶನವನ್ನು ಮುಂದುವರಿಸಿದರು. ಅದಕ್ಕಾಗಿ ಸ್ವಂತ ಮುದ್ರಣಾಲಯವನ್ನೂ ಸ್ಥಾಪಿಸಿದರು. ಇಂದು ಮಧ್ವಸಿದ್ಧಾಂತ ಗ್ರಂಥಾಲಯ ಎಂಬ ಹೆಸರನ್ನು ಕೇಳದ ಕನ್ನಡಿಗ ವಿರಳ. ಏಕೆಂದರೆ ಇಂಥ ಅಪೂರ್ವ ಮತ್ತು ಅಪೂರ್ವವಾದ ಪುಸ್ತಕಗಳನ್ನು ಪ್ರಕಾಶಿಸುತ್ತಿರುವ ಸಂಸ್ಥೆ ಕನ್ನಡದಲ್ಲಿ ಇದೊಂದೆ. ಆ ಕಾಲದಲ್ಲಂತು ಇದೊಂದು ಪವಾಡವೆಂದರೂ ತಪ್ಪಲ್ಲ. ಶ್ರೀ ಗುರುರಾಯರ ಸಾಹಸದ ಫಲವಾಗಿಯೆ ಇಂದು ಅನೇಕ ವೇದಾಂತ ಗ್ರಂಥಗಳು, ಧರ್ಮಶಾಸ್ತ್ರ ಗ್ರಂಥಗಳು ಕನ್ನಡದಲ್ಲಿ ಅನುವಾದಿಸಲ್ಪಟ್ಟು ಜನಸಾಮಾನ್ಯರನ್ನು ಮುಟ್ಟುವಂತಾಗಿವೆ. ನೂರಾರು ಯಕ್ಷಗಾನ ಪ್ರಸಂಗಗಳನ್ನು ಪ್ರಕಟಿಸಿ, ಜಿಲ್ಲೆಯ ಕಲಾರಂಗಕ್ಕೆ ಇವರು ಅಪೂರ್ವವಾದ ಸೇವೆಯನ್ನು ಸಲ್ಲಿಸಿದರು.

ಶ್ರೀ ರಾಯರು ತುಳಿದ ದಾರಿಯನ್ನೆ ತುಳಿಯುವವರಲ್ಲ. ಏನನ್ನಾನರೂ ಹೊಸತನ್ನು ಸಮಾಜಕ್ಕೆ ಕೊಡಬೇಕು ಎಂದು ಪ್ರತಿಕ್ಷಣವೂ ಅವರು ಚಡಪಡಿಸುತ್ತಿದ್ದರು. ಅವರು ಸಾಧಿಸಿದ ಹೊಸತನವೂ ಕಮ್ಮಿಯದೇನಲ್ಲ. ಅವರ ಅದ್ಭುತ ಸಾಧನೆಗಳ ಅರಿವು ಹೆಚ್ಚಿನ ಜನಕ್ಕೆ ಇನ್ನೂ ಬಂದೇ ಇಲ್ಲ. ಉಡುಪಿಯಲ್ಲಿ ಸಂಸ್ಕೃತ ಕಾಲೇಜನ್ನು ಸ್ಥಾಪಿಸಲು ಮೂಲ ಕಾರಣಪುರುಷರು ಇವರು ಎನ್ನುವುದು ಎಷ್ಟು ಮಂದಿಗೆ ತಿಳಿದಿದೆ? ಇವರ ಉತ್ಸಾಹಕ್ಕೆ ಮಠಾಧೀಶರ ಆಶೀರ್ವಾದ ದೊರಕಿತು ಎಂದೇ ಅವರ ಕನಸು ನನಸಾಯಿತು.

ದಾಸಸಾಹಿತ್ಯದ ಕುರಿತು ಅವರು ಪಟ್ಟ ಶ್ರಮವನ್ನು ನಾವಿಲ್ಲಿ ವಿಶೇಷವಾಗಿ ನೆನೆದುಕೊಳ್ಳಬೇಕು. ಉಡುಪಿಗೆ ಯಾತ್ರೆಗಾಗಿ ಬರುವ ಹೆಣ್ಮಕ್ಕಳನ್ನು ಮನೆಗೆ ಕರೆದು ಆತಿಥ್ಯ ನೀಡಿ ಸತ್ಕರಿಸಿ ಅವರು ಬಾಯಿಗೆ ಕಲಿತ ಹಾಡುಗಳನ್ನೆಲ್ಲ ಬರೆದುಕೊಂಡು ಹೀಗೆ ಹತ್ತಾರು ಜನರ ಸ್ಮರಣೆಯಿಂದ ಕೃತಿಗಳನ್ನು ಪುಸ್ತಕ ರೂಪದಲ್ಲಿ ಇಳಿಸಿದವರು ರಾಯರು ಪುರಂದರದಾಸರು, ಕನಕದಾಸರು, ವಿಜಯದಾಸರು, ಜಗನ್ನಾಥದಾಸರು, ವಾದಿರಾಜರು ಇವರೆಲ್ಲರ ಕೀರ್ತನೆಗಳನ್ನು ಒತ್ತಟ್ಟಿಗೆ ಸಂಕಲಿಸಿ ಪ್ರಕಟಿಸಿದ ಒಂದು ಸಂಸ್ಥೆ ಇದ್ದರೆ ಅದು ಮಧ್ವಸಿದ್ಧಾಂತ ಗ್ರಂಥಾಲಯ.

ಅಭಿನಂದನೀಯ ಬಂಧುಗಳೇ,

ಇಂಥ ಅಸಾಧಾರಣ ತಂದೆಯ ಮಕ್ಕಳಾಗಿ ನೀವು ಆ ಜವಾಬ್ದಾರಿಕೆಯ ಗುರುತರ ಭಾರವನ್ನು ಹೊತ್ತಿದ್ದೀರಿ. ನೀವು ಸೋದರರು ಜತೆಯಾಗಿ ತಂದೆ ಕಟ್ಟಿ ಬೆಳೆಸಿದ ಪ್ರೀತಿಯ ಸಂಸ್ಥೆಗಳನ್ನು ಹೆಗಲಿಗೆ ಹೆಗಲು ಕೊಟ್ಟು ನಡೆಸಿಕೊಂಡು ಬರುತಿದ್ದೀರಿ, ಅಣ್ಣ ಮುದ್ರಣಾಲಯದ ಹೊರೆ ಹೊತ್ತು ತಮ್ಮ ಪ್ರಕಾಶನದ ವಿಭಾಗದಲ್ಲಿ ಶ್ರಮಿಸಿ ನಿಮ್ಮ ತೀರ್ಥರೂಪರು ಹಚ್ಚಿದ ದೀಪವನ್ನು ತುಪ್ಪ ಎರೆದು ಬೆಳಗಿಸುತ್ತ ಬಂದಿದ್ದೀರಿ.

ಇಂಥ ಕೆಲಸಗಳು ಕೇವಲ ಆದರ್ಶದ ಸಾಹಸದಿಂದ ನಡೆಯಬೇಕಲ್ಲದೆ ಜನ ದುಡ್ಡು ಸುರಿದು ಸಾಕಷ್ಟು ಪ್ರಮಾಣದಲ್ಲಿ ಸಹಕರಿಸುವ ಸಂದರ್ಭ ಸ್ವಲ್ಪ ಕಮ್ಮಿ ಏಕೆಂದರೆ ಇದು ಪತ್ತೇದಾರಿ ಕಾದಂಬರಿಯ ಉದ್ಯಮವಲ್ಲ. ಈಗಂತು ಹೆಸರಿಗೆ ತಕ್ಕಂತೆ ನಿಮ್ಮ ಸಂಸ್ಥೆ ಆಚಾರ್ಯಮಧ್ವರ ಗ್ರಂಥಗಳನ್ನು ಅತ್ಯಂತ ದಕ್ಷತೆಯಿಂದ ಸರ್ವಾಂಗಸುಂದರವಾಗಿ ಕನ್ನಡ ಭಾಷೆಯಲ್ಲಿ ಪ್ರಕಟಿಸುತ್ತಿದ್ದೀರಿ, ಇದು ಪವಿತ್ರವೂ ಹೌದು; ಪುಣ್ಯ ಕಾರ್ಯವೂ ಹೌದು, ಇಂಥ ಕಾರ್ಯಗಳಲ್ಲಿ ಜನತೆ, ಸರಕಾರ ಎಲ್ಲ [illegible] ನಿಮ್ಮ ಸಹಕಾರ್ಯ ನಂತರ ನೀವಿಬ್ಬರೂ ಸೋದರರು ಸೇರಿ ಕನ್ನಡಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಕೊಡಬಲ್ಲಿರಿ ಎಂಬ ಭರವಸೆ ನಮಗಿದೆ. ನಿಮ್ಮ ಬಯಕೆ ನಮ್ಮೆಲ್ಲರ ಬಯಕೆಯೂ ಹೌದು. ನೀವು ತುಳಿದ ದಾರಿಯಲ್ಲಿ ಯಶಸ್ಸು ತಲೆಯೆತ್ತಲಿ, ಭಗವಾನ್ ಕೃಷ್ಣ ನಿಮ್ಮಿಬ್ಬರ ಮೂಲಕ ಮಹತ್ತ್ವದ ಈ ಕಾರ್ಯ ಮುಂದುವರಿಯುವಂತೆ ಕರುಣಿಸಲಿ ಎಂದು ನಾವು ಈ ಕನಕೋತ್ಸವದ ಸಂದರ್ಭದಲ್ಲಿ ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತ್ತೇವೆ.

ಉಡುಪಿ,
ಏಪ್ರಿಲ್ 26, 1965

ಇತಿ
ತಮ್ಮ ಶುಭಾಕಾಂಕ್ಷಿಗಳಾದ,
ಅಧ್ಯಕ್ಷ ಮತ್ತು ಸದಸ್ಯರು
ಶ್ರೀ ಕನಕದಾಸ ಚತುರ್ಥ ಶತಮಾನೋತ್ಸವ ಸಮಿತಿ, ಉಡುಪಿ.


ಮಂಗಳೂರು ತಾಲೂಕು ಮೂರನೆ ಕನ್ನಡ ಸಾಹಿತ್ಯ ಸಮ್ಮೇಳನ

ಶ್ರೀ ಪಾವಂಜೆ ಲಕ್ಷ್ಮೀನಾರಾಯಣಪ್ಪಯ್ಯ ವೇದಿಕೆ

ಶ್ರೀ ಮಹಾಲಿಂಗೇಶ್ವರ ಮಹಾಗಣಪತಿ ದೇವಸ್ಥಾನ

ಪಾವಂಜೆ. ದ.ಕ.

ದಿನಾಂಕ: ೧೧. ೩. ೧೯೯೬

ಸನ್ಮಾನ ಪತ್ರ

## ಶ್ರೀ ಪಾವಂಜೆ ಗುರುರಾಯರಿಂದ ಪ್ರಕಟವಾದ ಪ್ರಮುಖ ಧಾರ್ಮಿಕ ಪುಸ್ತಕಗಳು

1 ಪವಮಾನ ಪಂಚಸೂಕ್ತಮ್, ಹೋಮ ವಿಧಿ ಸಹಿತಮ್
2 ಸತ್ಯವಿನಾಯಕ ವೃತ ಕಲ್ಪೋಕ್ತ ಪೂಜಾಕಥಾ
3 ಋಗ್ವೇದೀಯಾ ಆಹ್ನಿಕಮಂಜರೀ
4 ಯಜುರ್ವೇದೀಯಾ ವೈಷ್ಣವ ಆಹ್ನಿಕಮಂಜರೀ
5 ಋಗ್ವೇದೀಯಃ ಶ್ರೀಸೂಕ್ತಃ, ಪುರುಷಸೂಕ್ತಃ
6 ಶಿವಕವಚ, ಇಂದ್ರಾಕ್ಷಿ ಸ್ತೋತ್ರ
7 ಪ್ರಾತರಾಹ್ನಿಕ ಪದ್ಧತಿಃ, ಪ್ರಾತಃ ಸ್ತೋತ್ರ, ಮಂಗಳಾಷ್ಟಕ, ಗೋಪೀಚಂದನ ಮುದ್ರಾಧಾರಣ ಸಹಿತಃ.
8 ಲಕ್ಷ್ಮೀಶೋಭಾನ ಹಾಡು
9 ಪುಸ್ತಕ ಪೂಜಾ ವಿಧಿಃ (ಸಾರ್ಥ ಸರಸ್ವತೀ ಪೂಜಾಕಥಾ ಸಹಿತಃ)
10 ಸ್ವರ್ಣಗೌರೀ ಪೂಜಾ ಕಥಾ
11 ದ್ವಾದಶಸ್ತೋತ್ರಾಣಿ
12 ಮಂಗಳಗೌರೀ ವೃತ, ಕಲ್ಪೋಕ್ತ ಪೂಜಾಕಥಾ
13 ವಾಯುಸ್ತುತಿಃ (ಪ್ರತಿಪದಾರ್ಥ, ತಾತ್ಪರ್ಯ, ಪುನಶ್ಚರಣ ವಿಧಿ ಸಹಿತ)
14 ರಾಮಸ್ತುತಿಃ, ಶಿವಸ್ತುತಿಃ (ಮರಾಠಿ)
15 ಪುಂಡರೀಕಾಕ್ಷಸ್ತೋತ್ರ (ಜಿತಂತೇಯಸ್ತೋತ್ರ, ಶತಾಪರಾಧಸ್ತೋತ್ರ ಸಹಿತ)
16 ಸುಂದರಕಾಂಡ ಕಥಾ ಸಂಗ್ರಹ (ಮಹಾಭಾರತ ತಾತ್ಪರ್ಯ ನಿರ್ಣಯ 7ನೇ ಅಧ್ಯಾಯ)
17 ವಾದಿರಾಜ ಸ್ತೋತ್ರ (ವಾದಿರಾಜ ಕವಚ, ಅಣುವೃಂದಾವನಾಖ್ಯಾನ ಸಹಿತಃ)
18 ರಾಘವೇಂದ್ರ ಸ್ತೋತ್ರ (ಕವಚ ಸಹಿತಃ) (ಕನ್ನಡ ತಾತ್ಪರ್ಯ ಸಹಿತಃ)
19 ವೇಂಕಟೇಶ ಸುಪ್ರಭಾತಮ್
20 ವೇಂಕಟೇಶ ಸ್ತೋತ್ರ (ಮರಾಠಿ)
21 ಕೃಷ್ಣಜನ್ಮಾಷ್ಟಮೀ (ತಾರಂಗೀ ಕಥಾ ಸಹಿತ)
22 ಮಧ್ವವಿಜಯಃ (ಮೂಲ)

23 ಸುಂದರಕಾಂಡ (ವಾಲ್ಮೀಕಿ ರಾಮಾಯಣ) ಮೂಲ
24 ವೇಂಕಟೇಶ ಮಹಾತ್ಮ್ಯಮ್ (ಭವಿಷ್ಯೋತ್ತರಪುರಾಣಾಂತರ್ಗತಮ್)
25 ಗಜೇಂದ್ರ ಮೋಕ್ಷಃ
26 ಗಣೇಶ ಪೂಜಾ ವಿಧಿಃ, ಸ್ಯಮಂತೋಪಖ್ಯಾನ ಸಹಿತಾ
27 ಶಿವಾಲಯೇ ಶಿವಪೂಜಾವಿಧಿಃ
28 ರಾಮರಕ್ಷಾ ಸ್ತೋತ್ರಃ
29 ಮಹಾಸಂಕಲ್ಪಃ
30 ಗಣೇಶ ಸಹಸ್ರನಾಮ ಸ್ತೋತ್ರ (ಸಹಸ್ರ ನಾಮಾವಲೀ ಸಹಿತ)
31 ಪದ್ಮಾವತೀ ಕಲ್ಯಾಣ ಹಾಡು ಮತ್ತು ಸೋಮಾವತೀ ಹಾಡು
32 ಸತ್ಯನಾರಾಯಣ ಕಥೆ ಹಾಡು
33 ಮಂಗಳಗೌರೀ ಹಾಡು
34 ದತ್ತಾತ್ರೇಯ ಜನನ ಹಾಡು
35 ಸುಧಾಮ ಚರಿತ್ರೆ ಹಾಡು
36 ವರಮಹಾಲಕ್ಷ್ಮೀ ಹಾಡು
37 ಗೋಪಿಗೀತಂ–ಕೃಷ್ಣಾಷ್ಟಕಃ–ಅಚ್ಯುತಾಷ್ಟಕಃ
38 ಬ್ರಹ್ಮಕೊರವಂಜಿ ಹಾಡು
39 ಚಂದ್ರಹಾಸನ ಕಥೆ ಹಾಡು
40 ಸಂಕ್ಷೇಪ ಉತ್ತರಕಾಂಡ ರಾಮಾಯಣ
41 ಪ್ರಹ್ಲಾದ ಚರಿತ್ರೆ ಹಾಡು
42 ಮದಾಲಸೆ ಜೋಗುಳ ತೂಗಿದ ಹಾಡು
43 ಜೋಗುಳ ಹಾಡು
44 ಶ್ರೀಕೃಷ್ಣದಾನ ವೃತ ಹಾಡು
45 ಜಲಕ್ರೀಡೆ ಹಾಡು
46 ಗೊಲ್ಲತಿ ಹಾಡು, ಗೋಪಿ ಪ್ರಲಾಪ
47 ರಾಮಕೃಷ್ಣ ದೇವರ ಹಾಡು

48 ಶ್ರೀರಾಮನ ಹಾಡು

49 ಸೀತಾ ದುಃಖ ಹಾಡು

50 ಚೇಳಿನ ಹಾಡು

51 ಸಖೂಬಾಯಿ ಹಾಡು

52 ಕೀಚಕ ಸಂಧಿ ಹಾಡು

53 ಋಗ್ವೇದೀಯಂ ತ್ರೈಕಾಲಿಕಸಂಧ್ಯಾವಂದನಮ್

54 ಯಜುರ್ವೇದೀಯಂ ತ್ರೈಕಾಲಿಕಸಂಧ್ಯಾವಂದನಮ್

55 ಋಗ್ವೇದೀಯ ಪಂಚಾಯತನ ಪೂಜಾ ಪದ್ಧತಿ

56 ದೇವಪೂಜಾಪದ್ಧತಿಃ

57 ಅಭಿಷೇಕ ಸೂಕ್ತಾನಿ

58 ರುದ್ರಾಧ್ಯಾಯಃ (ಲಘುನ್ಯಾಸ–ಚಮಕ–ಪಂಚರುದ್ರ ಸಹಿತಃ)

59 ಋಗ್ವೇದೀಯ ನವಗ್ರಹ ಪೂಜಾ ಜಪ ವಿಧಿಃ

60 ಲಕ್ಷ್ಮೀಹೃದಯಂ, ನಾರಾಯಣಹೃದಯಂ, ನಾರಾಯಣವರ್ಮ, ಶ್ರೀ ಶ್ರೀಶ ಗುಣದರ್ಪಣ ಸಹಿತ

61 ಋಗ್ವೇದೀಯ ಪುಣ್ಯಾಹವಾಚನವಿಧಿಃ ಅಗ್ನಿಮುಖ ಸಹಿತಃ

62 ಋಗ್ವೇದೀಯಃ ಶ್ರಾದ್ಧಪ್ರಯೋಗಃ

63 ಯಜುರ್ವೇದೀಯಃ ಬೋಧಾಯನ ಶ್ರಾದ್ಧಪ್ರಯೋಗಃ

64 ಋಗ್ವೇದೀಯ ಆಶ್ವಲಾಯನ ಬ್ರಹ್ಮಯಜ್ಞ, ವೈಶ್ವದೇವ

65 ಋಗ್ವೇದೀಯ ಸ್ಮಾರ್ತನಿತ್ಯಾಹ್ನಿಕ ವಿಧಿಃ, ಬ್ರಹ್ಮಯಜ್ಞ, ದೇವ ಪೂಜಾವಿಧಿಃ ಸಹಿತ

66 ವರಮಹಾಲಕ್ಷ್ಮೀ ವ್ರತ, ಕಲ್ಪೋಕ್ತ ಪೂಜಾಕಥಾ

67 ನಾಗಪಂಚಮೀ ವ್ರತ, ಕಲ್ಪೋಕ್ತ ಪೂಜಾಕಥಾ

68 ಮಹಾಶಿವರಾತ್ರಿ ವ್ರತ, ಕಲ್ಪೋಕ್ತ ಪೂಜಾಕಥಾ

69 ವಾಯುಸ್ತುತಿಃ (ದಪ್ಪಾಕ್ಷರಗಳ ಪ್ರತಿ)

70 ಶನೈಶ್ಚರ ಕಲ್ಪೋಕ್ತ ಪೂಜಾಕಥಾ

71 ಯಜುರ್ವೇದೀಯ ಬೋಧಾಯನ ಬ್ರಹ್ಮಯಜ್ಞ, ವೈಶ್ವದೇವ ವಿಧಿಃ

72 ಮಹಾಗಣಪತಿ ಹೋಮ ಪ್ರಯೋಗಃ (ಶೈವಾಗಮಾನುಸಾರೀ)

73 ಮಹಾಲಯ ವಿಧಿಃ (ಋಗ್ಯಜುಃಸಾಮಶಾಖಾಯಃ) (ಧರ್ಮಪಿಂಡ)

74 ಸತ್ಯನಾರಾಯಣ ವ್ರತ ಕಲ್ಪೋಕ್ತ ಪೂಜಾಕಥಾ

75 ನವರಾತ್ರ ನವದುರ್ಗಾ ಕಲ್ಪೋಕ್ತ ಪೂಜಾವಿಧಿಃ

76 ಶ್ರೀಮದನಂತವ್ರತ ಕಲ್ಪೋಕ್ತ ಪೂಜಾಕಥಾ

77 ಪೂಜಾ ಸಂಗ್ರಹಃ (ಬಲೀಂದ್ರ–ಗೋ–ತುಲಸ್ಯಾದಿ)

78 ಸಪ್ತಶತೀ – ದುರ್ಗಾ ಪೂಜಾ ವಿಧಿ ಸಹಿತಾ (ಕಿಸೆ ಗಾತ್ರದಲ್ಲಿ)

79 ಶ್ರೀವಿಷ್ಣುಸಹಸ್ರನಾಮಸ್ತೋತ್ರಂ–ಶ್ರೀಕೃಷ್ಣಾಷ್ಟೋತ್ತರಶತ–ನಾಮ–ಸ್ತೋತ್ರಂ–ಶ್ರೀವೇಂಕಟೇಶ ಸ್ತೋತ್ರಂ, ಶ್ರೀವಿಷ್ಣುವಿಜಯಸ್ತೋತ್ರಮ್

80 ದಶಾವತಾರಸ್ತುತಿಃ

81 ಶ್ರೀವಿಷ್ಣುಸಹಸ್ರನಾಮಾವಲೀ, ಶ್ರೀಕೃಷ್ಣಾಷ್ಟೋತ್ತರಶತನಾಮಾವಲೀ, ಶ್ರೀಕೇಶವಾದಿಚತುರ್ವಿಂಶತಿನಾಮಾವಲೀ ಸಹಿತಾ

82 ತತ್ತ್ವನ್ಯಾಸ ಮಾತೃಕಾನ್ಯಾಸ

83 ಋಷಿಪಂಚಮೀ ಪೂಜಾಕಥಾ

84 ಆದಿತ್ಯಹೃದಯಂ–ಸೂರ್ಯಮಂಡಲಸ್ತೋತ್ರ ಸಹಿತ

85 ಶ್ರೀನೃಸಿಂಹಸ್ತುತಿ–ಶ್ರೀನೃಸಿಂಹಸ್ತವ–ಶ್ರೀನೃಸಿಂಹಸ್ತೋತ್ರ–ಶ್ರೀನೃಸಿಂಹಕವಚ ಸಹಿತಾ

86 ಋಗ್ವೇದೀಯ ಸ್ಮಾರ್ತ ಶ್ರಾದ್ಧ ಪ್ರಯೋಗಃ

87 ತುಳಸೀ ಸಂಕೀರ್ತನೆ

88 ನವಗ್ರಹ ಸ್ತೋತ್ರಾಣಿ – ಅಶ್ವತ್ಥನಾರಾಯಣ ಸ್ತೋತ್ರ ಸಹಿತ

ಹರಿದಾಸ ಸಾಹಿತ್ಯ ಮತ್ತು ಯಕ್ಷಗಾನದ ಪುಸ್ತಕಗಳ ಬಗ್ಗೆ ವಿಸ್ತೃತವಾಗಿ ವಿವರಿಸಿರುವುದರಿಂದ, ಈ ಪಟ್ಟಿಯಲ್ಲಿ ಅವುಗಳ ಉಲ್ಲೇಖವಿಲ್ಲ.

## ಈಗ ಉಪಲಬ್ಧವಿರುವ ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯದ ಹೊಸ ಪ್ರಕಟನೆಗಳು ಮತ್ತು ಮರುಮುದ್ರಿತ ಗ್ರಂಥಗಳು

1 ಋಗ್ವೇದೀಯಂ ತ್ರೈಕಾಲಿಕಸಂಧ್ಯಾವಂದನಮ್ (ಸಂಸ್ಕೃತ ಮತ್ತು ಆಂಗ್ಲ ಭಾಷೆಗಳಲ್ಲಿ)

2 ಶ್ರಾದ್ಧ ಮೀಮಾಂಸ (ಪ್ರಶ್ನೋತ್ತರಮಾಲಿಕಾ)

3 ಜೀವಚ್ಛ್ರಾದ್ಧ ಪ್ರಯೋಗ

4 ನಾರಾಯಣಬಲಿ ಪ್ರಯೋಗ, ಮೋಕ್ಷನಾರಾಯಣಬಲಿ ಪ್ರಯೋಗಶ್ಚ

5 ಅಶೌಚಸಾರಸಂಗ್ರಹ

6 ಅಶೌಚಮಾರ್ಗದರ್ಶಿನೀ

7 ಪ್ರಯೋಗ ಪ್ರದೀಪ (ಸ್ಮೃತ್ಯನುಸಾರಿ)

8 ಋಗ್ವೇದೀಯಃ ಪೂರ್ವಷೋಡಶಸಂಸ್ಕಾರಪ್ರಯೋಗಃ

9 ಶ್ರೀವೇಂಕಟೇಶ ಮಾಹಾತ್ಮ್ಯಮ್–ಭವಿಷ್ಯೋತ್ತರಪುರಾಣಾಂತರ್ಗತಮ್–ಕನ್ನಡತಾತ್ಪರ್ಯ ಸಹಿತಮ್. ಆದಿತ್ಯಪುರಾಣಾಂತರ್ಗತ ಶ್ರೀವೇಂಕಟೇಶ ಮಾಹಾತ್ಮ್ಯಮ್– ಶ್ರೀವೇಂಕಟೇಶ ಕಲ್ಪೋಕ್ತ–ಪೂಜಾ–ವಿಧಿ ಸಹಿತಮ್

10 ಶ್ರೀಲಲಿತಾಸಹಸ್ರನಾಮಸ್ತೋತ್ರಮ್–ಶ್ರೀಲಲಿತಾಸಹಸ್ರನಾಮಾವಲೀ–ಶ್ರೀಲಲಿತಾತ್ರಿಶತೀ–ನಾಮಸ್ತೋತ್ರಮ್, ಶ್ರೀಮಹಿಷಾಸುರಮರ್ದಿನೀಸ್ತೋತ್ರಂ

11 ಯಕ್ಷಗಾನ ಸಭಾಲಕ್ಷಣ ಮತ್ತು ಪ್ರಸಂಗ ಪೀಠಿಕೆ

12 ಕಲ್ಯಾಣ ಪ್ರಸಂಗಗಳು – ಸುಭದ್ರಾ, ಗಿರಿಜಾ, ಜಾಂಬವತೀ, ರತಿ ಕಲ್ಯಾಣ

13 ಅನ್ವಾದಾನ ಸಂಗ್ರಹ (ದೇವನಾಗರೀ ಲಿಪಿ)

14 ಋಗ್ವೇದೀಯಃ ಅಪರಸಂಸ್ಕಾರಪ್ರಯೋಗಃ

15 ವಾರ್ಷಿಕ ವಿಶೇಷ ದಿನಗಳು

16 ಪವಮಾನ ಪಂಚಸೂಕ್ತಮ್–ಹೋಮವಿಧಿ ಸಹಿತಮ್ (ದೇವನಾಗರೀಲಿಪಿ)

17 ಶ್ರೀಭೂತಕಲ್ಪ

ಸಂಗ್ರಹ : **ಕೆ. ಸುಬೋಧ್ ಭಟ್**

ದಿನಾಂಕ : 15–04–2023
(ಶೋಭಕೃತ್ ಸಂವತ್ಸರ, ಚೈತ್ರ, ಕೃಷ್ಣ ದಶಮಿ,
ಸೌರಮಾನ ಯುಗಾದಿ)

॥ ಶ್ರೀಕೃಷ್ಣಾರ್ಪಣಮಸ್ತು ॥